'ಅರಳು ಮರಳು' ಅನಂತರ
ಮರಳಿ ಅರಳಿದ ಕವನ ಸಂಕಲನ

# ಪ್ರತಿಬಿಂಬಗಳು

ಅಂಬಿಕಾತನಯದತ್ತ (ವರಕವಿ ಡಾ. ದ.ರಾ. ಬೇಂದ್ರೆ) ವಿರಚಿತ





ಸಂಪಾದಕ: ಡಾ. ವಾಮನ ಬೇಂದ್ರೆ

ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆಯ ಕೊಡುಗೆ

೨೪-೧೧-೧೯೮೧ ರಂದು ಕೀರ್ತಿಶೇಷ ಡಾ|| ದ. ರಾ. ಬೇಂದ್ರೆಯವರ ಕವಿ ನಿವಾಸ-೧೩, ಶ್ರೀಮಾತಾ, ಸಾಧನಕೇರಿ, ಧಾರವಾಡದಲ್ಲಿ ಡಾ|| ಕೆ. ಎಸ್. ಶರ್ಮಾ ಅವರ ಅಧ್ಯಕ್ಷತೆ, ಪಿ. ಆರ್. ಭಾಗವತ, ಪಟ್ಟಣಕೋಡಿ, ಸುರೇಶ ಕುಲಕರ್ಣಿ ಇವರ ಸಹಕಾರದೊಂದಿಗೆ ಡಾ|| ವಾಮನ ಬೇಂದ್ರೆಯವರು ಬೇಂದ್ರೆ ಮನೆತನದ ಸಕಲ ಸದಸ್ಯರನ್ನೊಳಗೊಂಡು ''ಅಂಬಿಕಾತನಯದತ್ತ ವೇದಿಕೆ''ಯನ್ನು ಸ್ಥಾಪಿಸಿದರು. ಈ ವೇದಿಕೆಯು ಸತತವಾಗಿ ಬೇಂದ್ರೆ ಸ್ಮರಣೋತ್ಸವಗಳನ್ನು ರಾಜ್ಯದಾದ್ಯಂತ ಮಾಡುತ್ತ ಬಂದಿದೆ. ಅಂಬಿಕಾತನಯದತ್ತ ವೇದಿಕೆ ಈ ವರೆಗೆ ಮಾಡಿದ ಮಹತ್ತ್ವದ ಸಾಧನೆಗಳು ಹೀಗಿವೆ :

(೧) ಕರ್ನಾಟಕ ಸರಕಾರ ೧೯೯೩ರಲ್ಲಿ ವರಕವಿ ಡಾ|| ದ. ರಾ. ಬೇಂದ್ರೆ (ಅಂಬಿಕಾತನಯದತ್ತ) ರಾಷ್ಟ್ರೀಯ ಸ್ಮಾರಕ (ರಿ) ಸಂಸ್ಥೆಯನ್ನು ಸ್ಥಾಪಿಸಿತು. ಧಾರವಾಡದ ಕವಿ ನಿವಾಸದ ಪಕ್ಕದಲ್ಲಿ ಬೇಂದ್ರೆ ಮನೆತನ ಈ ಸಂಸ್ಥೆಗೆ ದಾನವಾಗಿ ಕೊಟ್ಟ ನಿವೇಶನದಲ್ಲಿ ''ಬೇಂದ್ರೆ ಭವನ'' ಎಂಬ ಭವ್ಯ ಕಟ್ಟಡ ಕಟ್ಟಿಸುವುದಲ್ಲದೆ, ಅಲ್ಲಿ ಬೇಂದ್ರೆ ಜೀವನ ಆಧರಿಸಿ 'ಸಮರಸವೇ ಜೀವನ' ಸ್ಮರಣೀಯ ಭಾವಚಿತ್ರ ಪ್ರದರ್ಶನ ಏರ್ಪಡಿಸಿ, ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯು ೧೯೯೭ ರಿಂದ ಸಕಲರಿಗೆ ಪ್ರೇಕ್ಷಣೀಯ ಸ್ಥಳವಾಗುವಂತೆ ಕಾರ್ಯಾಚರಣೆಯಲ್ಲಿ ತೊಡಗಿದೆ. ಪ್ರತಿ ತಿಂಗಳ ಬೇಂದ್ರೆ ಸ್ಮಾರಕ ಉಪನ್ಯಾಸ ಹಾಗೂ ಭಾವಗೀತ, ನಾಟಕ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿದೆ. ಪ್ರತಿವರ್ಷ ೨೫,೦೦೦-೦೦ ರೂಪಾಯಿಯ ಒಂದು ಫೆಲೋಶಿಪ್ ಹಾಗೂ ೧೦,೦೦೦-೦೦ ರೂಪಾಯಿಯ ಅಂಬಿಕಾತನಯದತ್ತ ಪ್ರಶಸ್ತಿಯನ್ನು (ಬೇಂದ್ರೆ ಮನೆತನ ಸಂಗ್ರಹಿಸಿದ ನಿಧಿಯನ್ನು ಆಧರಿಸಿ) ಕೊಡುತ್ತ ಬಂದಿದೆ. ಅಂಬಿಕಾತನಯದತ್ತ ವೇದಿಕೆ ಈ ಕಾರ್ಯಗಳಿಗೆ ಪ್ರೇರಣೆ ನೀಡಿದೆ.

(೨) ಹುಬ್ಬಳ್ಳಿಯ ''ವಿಶ್ವಶ್ರಮಚೇತನ'', ಬಸವೇಶ್ವರ ನಗರ ಸ್ಟಾಪ್, ಗೋಕುಲ ರಸ್ತೆ, ಆವರಣದಲ್ಲಿ (ಅ) ಬೇಂದ್ರೆ ಪ್ರತಿಮೆ (ಬ) ವರಕವಿ ಡಾ|| ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ (ಕ) ಬೇಂದ್ರೆ ಕಂಒ ಒಸಳ ಪಿದ್ಯಾವಿನಾಯಕ ದೇವಾಲಯ (ಡ) ಬೇಂದ್ರೆ ಸಂಗೀತ ಆಕಾಡೆಮಿಗಳನ್ನು ಸ್ಥಾಪಿಸಿ (ಈ) ಬೇಂದ್ರೆ ಕುಟೀರದಲ್ಲಿ ವಿವಿಧ ಕಾರ್ಯಕ್ರಮ ಬೇಂದ್ರೆ ಜನ್ಮ ದಿನೋತ್ಸವ ಹಾಗೂ ಬೇಂದ್ರೆ ಪುಣ್ಯ ದಿನದ ಸ್ಮರಣೋತ್ಸವಗಳನ್ನು ವೈಶಿಷ್ಟ್ಯಪೂರ್ಣವಾಗಿ ಸಂಯೋಜಿಸುತ್ತ ಬಂದಿದೆ. ೨೦೦೫ರಲ್ಲಿ ವಿಶ್ವಶ್ರಮ ಚೇತನದಲ್ಲಿ ಬೇಂದ್ರೆ ಔದುಂಬರದತ್ತ ಚೈತನ್ಯ ಎಂಬ ಸ್ಮೃತಿ ಪೀಠವನ್ನು ಸ್ಥಾಪಿಸಲಾಗಿದೆ. ಕರ್ನಾಟಕ ರಾಜ್ಯ ಸರಕಾರಿ ದಿನಗೂಲಿ ನೌಕರರ ಮಹಾಮಂಡಲ ಈ ಸಂಯೋಜನೆ ಕೈಕೊಂಡಿದೆ.

(೩) ಬೇಂದ್ರೆ ಕವಿ ನಿವಾಸವನ್ನು ವಸ್ತು ವಾಸ್ತು ಸಮುಚ್ಚಯವಾಗಿ ಪ್ರೇಕ್ಷಣೀಯ ಸ್ಥಳವಾಗಿ ಸಂಯೋಜಿಸಿ, ಅಲ್ಲಿ ಸಖೀಗೀತ-ಸ್ಮಾರಕ ಹಾಗೂ ವರಕವಿ ಡಾ|| ದ. ರಾ. ಬೇಂದ್ರೆ ಅಧ್ಯಯನ ಕೇಂದ್ರವನ್ನು ೨೦೦೪ ರಿಂದ ಪ್ರಾರಂಭಿಸಲಾಗಿದೆ. ಇದಕ್ಕೆ ಅಂಬಿಕಾತನಯದತ್ತ ವೇದಿಕೆ ಪ್ರೇರಣೆ ನೀಡಿದೆ.

(೪) ಹುಬ್ಬಳ್ಳಿಯ ''ವಿಶ್ವಶ್ರಮ ಚೇತನ'' ಆವರಣದಲ್ಲಿರುವ ಬೇಂದ್ರೆ ಕುಟೀರದಲ್ಲಿ ೧೯೯೯ ರಿಂದ ಬೇಂದ್ರೆ ಸಂಗೀತ ಅಕ್ಯಾಡೆಮಿಯನ್ನು ಸ್ಥಾಪಿಸಿ ಬೇಂದ್ರೆ ಸಂಗೀತ ರಾತ್ರಿಯನ್ನು ಸಂಯೋಜಿಸಿ ''ಬೇಂದ್ರೆ ಸಂಗೀತ'' ಪರಂಪರೆಯನ್ನು ಬೆಳೆಸುವ ಕಾರ್ಯ ಮಾಡುತ್ತಿದೆ.

(೫) ಬೇಂದ್ರೆ ಸಂಶೋಧನ ಸಂಸ್ಥೆಯು ಬೇಂದ್ರೆ ಸಮಗ್ರ ಸಾಹಿತ್ಯ-ಸಂಶೋಧನೆಯ ಕೃತಿಗಳನ್ನು ೨೫ ಸಂಪುಟಗಳಲ್ಲಿ ಪ್ರಕಟಿಸುವ ಬೃಹತ್ ಯೋಜನೆಯನ್ನು ಸಂಯೋಜಿಸಿದೆ. ಈಗಾಗಲೇ ಸಮಗ್ರ ಕಾವ್ಯದ ಆರು ಸಂಪುಟಗಳು ೨೦೦೩ರಲ್ಲಿ ಔದುಂಬರಗಾಥೆಯಾಗಿ ಪ್ರಕಟವಾಗಿದೆ. ಏಳನೆಯ ಸಂಪುಟ ''ಶ್ರೀ ಮಾತಾರವಿಂದ ಪ್ರಜ್ಞಾಪ್ರಕಾಶ'' ೨೦೦೫ರಲ್ಲಿ ಪ್ರಕಟವಾಗಿದೆ. ಮುಂದಿನ ಕೆಲಸ ಪ್ರಗತಿ ಪಥದಲ್ಲಿ ಸಾಗಿದೆ.

(೬) ಬೇಂದ್ರೆ ಸಂಗೀತ ಅಕ್ಯಾದೆಮಿಯು ಬೇಂದ್ರೆ ಸಮಗ್ರ ಕಾವ್ಯಕ್ಕೆ ಶಾಸ್ತ್ರೀಯ ಸಂಗೀತ ಸಂಯೋಜನೆಯನ್ನು ಮಾಡಿ, ಮೂಲ ಕಾವ್ಯದೊಂದಿಗೆ ಬೃಹತ್ ಸಂಗ್ರಹವಾಗಿ ಪ್ರಕಟಿಸುವ ಯೋಜನೆಯಿದೆ. ಈಗಾಗಲೇ ಈ ದಿಶೆಯಲ್ಲಿ ಆರು ಕೃತಿಗಳು ಪ್ರಕಟವಾಗಿವೆ. ತನ್ಮೂಲಕ ''ಬೇಂದ್ರೆ ಸಂಗೀತ'' ಪರಂಪರೆಯನ್ನು ಸ್ಥಾಪಿಸಲು ಅನುವಾಗುವ ಸಂಗೀತ-ಸಾಹಿತ್ಯ ರಚನೆಯ ಕಾರ್ಯ ಇದಾಗಿದೆ.

ಕಾರ್ಯಸ್ಥಳ : ''ವಿಶ್ವಶ್ರಮ ಚೇತನ'', ಬಸವೇಶ್ವರ ನಗರ, ಗೋಕುಲ ರೋಡ, ಹುಬ್ಬಳ್ಳಿ-೫೮೦ ೦೩೦.



# ಪ್ರತಿಬಿಂಬಗಳು

''ಅರಳು ಮರಳು'' ನಂತರ ಮರಳಿ ಅರಳಿದ ಕವನ ಸಂಕಲನ

ಅಂಬಿಕಾತನಯದತ್ತರ ಕಾವ್ಯ

(ವರಕವಿ ಡಾ|| ದ. ರಾ. ಬೇಂದ್ರೆ)

# ಪ್ರತಿಬಿಂಬಗಳು

"ಅರಳು ಮರಳು" ನಂತರ ಮರಳಿ ಅರಳಿದ ಕವನ ಸಂಕಲನ


ಸಂಪಾದಕರು :

ಡಾ|| ವಾಮನ ಬೇಂದ್ರೆ

ಸಹ-ನಿರ್ದೇಶಕರು,

ಬೇಂದ್ರೆ ಸಂಶೋಧನ ಸಂಸ್ಥೆ





ಪ್ರಕಾಶಕರು :

ಡಾ|| ಕೆ. ಎಸ್. ಶರ್ಮಾ,

ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ,

ಶ್ರೀಮಾತಾ ಪ್ರಕಾಶನ,

ಅಂಬಿಕಾತನಯದತ್ತ ವೇದಿಕೆ

"ವಿಶ್ವಶ್ರಮ ಚೇತನ", ಗೋಕುಲ ರಸ್ತೆ, ಹುಬ್ಬಳ್ಳಿ - ೫೮೦ ೦೩೦.

ಕರ್ನಾಟಕ ರಾಜ್ಯ

ಪ್ರತಿಬಿಂಬಗಳು
(ಕವನ ಸಂಕಲನ)

★

ಕವಿ : 'ಅಂಬಿಕಾತನಯದತ್ತ' (ವರಕವಿ ಡಾ|| ದ. ರಾ. ಬೇಂದ್ರೆ)

★

ಸಂಪಾದಕರು : ಡಾ|| ವಾಮನ ಬೇಂದ್ರೆ,
ಸಹ ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ

★

ಪ್ರಕಾಶಕರು :
ಡಾ|| ಕೆ. ಎಸ್. ಶರ್ಮಾ,
ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ
ಶ್ರೀಮಾತಾ ಪ್ರಕಾಶನ,
ಅಂಬಿಕಾತನಯದತ್ತ ವೇದಿಕೆ, 'ವಿಶ್ವಶ್ರಮ ಚೇತನ', ಗೋಕುಲ ರಸ್ತೆ, ಹುಬ್ಬಳ್ಳಿ - ೫೮೦ ೦೩೦

★



★

ಬೆಲೆ : ರೂ.೫೦-೦೦

★

ಮುದ್ರಣ : ೧೮-೫-೨೦೦೭

★

ಆಕಾರ : ೧/೮ ಡೆಮ್ಮಿ

★

ಕಲೆ : ಶ್ರೀ ಸುರೇಶ ಕುಲಕರ್ಣಿ, ಧಾರವಾಡ

★

ಹೊರಹೊದಿಕೆ ವಿನ್ಯಾಸ : ಶ್ರೀ ರವೀಂದ್ರ ಶಿರೋಳಕರ, ಧಾರವಾಡ

★

ಪುಟ ವಿನ್ಯಾಸ/ಡಿಟಿಪಿ : ಶ್ರೀ ಈರಣ್ಣ ನೂಲ್ವಿ, ಡಾ|| ಕೆ. ಎಸ್. ಶರ್ಮಾ ಐ.ಟಿ.ಸಿ., ಹುಬ್ಬಳ್ಳಿ

★

ಮುದ್ರಕರು :
ಶರ್ಮಾ ಮುದ್ರಕರು,
೪, ಪತ್ರಕರ್ತರ ಕಾಲನಿ, ಹುಬ್ಬಳ್ಳಿ - ೫೮೦ ೦೩೨.

★

ಕೃತಿಗಳಿಗಾಗಿ ಬರೆಯಿರಿ :
ಶ್ರೀಮಾತಾ ಪ್ರಕಾಶನ,
'ವಿಶ್ವಶ್ರಮ ಚೇತನ', ಗೋಕುಲ ರಸ್ತೆ ಹುಬ್ಬಳ್ಳಿ - 580 030.
ದೂರವಾಣಿ : (0836) 2330466.

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 401, ಶಿವಮೊಗ್ಗ ಜಿಲ್ಲೆ ದೂರವಾಣಿ : 08183-228616 (ಕ).

# ಸಾವಿರದ ನಮನ

ಮರಳಿ ಅರಳಿದ ಕವನ ಕುಸುಮಗಳನ್ನು
ಕನ್ನಡ ಸರಸ್ವತಿಗೆ ಅರ್ಪಿಸುವ ಮೂಲಕ,
ಆರದ ಆರತಿಯನ್ನು ಸದಾಕಾಲ ಬೆಳಗುತ್ತ
ವಿಶ್ವಮಾನವ ವಿಕಾಸಕ್ಕೆ ನವಬೆಳಗನ್ನು ಬಿಂಬಿಸುತ್ತಾ ಸಾಗಿರುವ
ಬೆಳಕಿನ ಮಹಾಪಥಿಕ, ಋಷಿಕವಿ, ವಿಶ್ವಕವಿ, ಅಮರಕವಿ
ಔದುಂಬರದತ್ತ ಚೈತನ್ಯ ಕ್ಕೆ
(ದ. ರಾ. ಬೇಂದ್ರೆ-ಅಂಬಿಕಾತನಯದತ್ತ)

**ನಮ್ಮ ಸಾವಿರದ ನಮನಗಳು.**

ವಾಮನ
(ಸಂಪಾದಕ)

ಕುವಲಯಶ್ಯಾಮ
(ಪ್ರಕಾಶಕ)

# ಪರಿವಿಡಿ

ಮುದ್ರಣ : ಪ್ರಥಮ ಆವೃತ್ತಿ : ೧೯೮೭

# ಸಂಪಾದಕರ ಭೂಮಿಕೆ

ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ
ನಾಸ್ತಿ ಯೇಷಾಂ ಯಶಃಕಾಯೇ ಜರಾಮರಣಜಂ ಭಯಂ ॥

ಬೇಂದ್ರೆಯವರಿಗೆ ನಾರಾಯಣ ದರ್ಶನ, ಎಳೆಯರ ಮತ್ತು ಗೆಳೆಯರ ಹೃದಯದಲ್ಲಿ ಆಯಿತು. 'ಗೆಳೆಯರ ಗುಂಪಿನ' ಕಾವ್ಯನಿರ್ಮಿತಿ ಎಂಬುದು ಸಾಹಿತ್ಯದ ಒಂದು ಸರಸಸಲ್ಲಾಪ ಎಂದು ಬೇಂದ್ರೆಯವರು ಮೊದಲು ಭಾವಿಸಿದ್ದು; ಅನಂತರದಲ್ಲಿ ಅದು ತಮ್ಮ ಜೀವಿತಕಾರ್ಯ ಎಂದು ನಿರ್ಣಯಿಸಿದರು. ಕಾವ್ಯಮಾಧ್ಯಮದಿಂದ ಕನ್ನಡ ಭಾಷೆಯಲ್ಲಿ ವಿಶಿಷ್ಟಕಾರ್ಯವನ್ನು ಮಾಡಲೆಂದೇ ಜನಿಸಿದ ಕಾರಣಪುರುಷನಾದ ಬೇಂದ್ರೆ, ಲಿಪಿಕಾರ; ಅಂಬಿಕಾತನಯದತ್ತ-ಕವಿ ಎಂಬ ನಿಲುವು ಬೇಂದ್ರೆಯವರದು.

''ಕವಿತೆ ಎಲ್ಲರ ಮನೆಯಲ್ಲೂ ಬೆಳೆಯುವ ಹೀರೆ ಹೂವಲ್ಲ. ಕೆಲವು ಜನರ ಮನಸ್ಸಿನ ಉದ್ಯಾನದಲ್ಲಿ ಅರಳುವ ಮಂದಾರ ಕುಸುಮ. ವಾಚಕರಿಂದ ಕವಿಯ ಕೀರ್ತಿ ಹೆಚ್ಚಿದೆ, ಬೆಲೆ ಏರಿದೆ. ಕೆರಳಿದ ಕವಿ ಕಾಳಿಂಗ ಸರ್ಪ. ಭಾಷೆ ಮಾನವನ ಕೂಸು. ಯಾರ ಸಂಪರ್ಕ ಮತ್ತು ಸಹವಾಸದಲ್ಲಿ ಅದು ಬೆಳೆಯುವುದೋ ಅವರ ಮಾತನ್ನು ಅದು ಸುಲಭವಾಗಿ ಸ್ವೀಕರಿಸುತ್ತದೆ. ಭಾಷೆ ಮಾನವನ ಮಂತ್ರ, ತಂತ್ರ. ಹೃದಯಕ್ಕೆ ಹೃದಯಗಳನ್ನು ಕೂಡಿಸಿಕೊಡುವುದೆ ಅದರ ಸಾಧ್ಯ. ಮಾತಿನ ವೀಣೆಯನ್ನು ಮೀಟುವುದು ಭಾವದ ಬೆರಳು. ಆಗ ಹುಟ್ಟುವುದು ಧ್ವನಿ. ಅದೇ ದೈವೀ ಪ್ರಾಕೃತ'' ಎಂಬ ವಿಚಾರಗಳನ್ನು ೧೯೪೫ರ ವಿಚಾರ ಮಂಜರಿಯಲ್ಲಿ ಬೇಂದ್ರೆ ವಿವರಿಸಿದ್ದಾರೆ. ೧೯೪೯ ರ ಸಾಹಿತ್ಯ ವಿಮರ್ಶೆಯಲ್ಲಿ ಬೇಂದ್ರೆ ನುಡಿದದ್ದು ಹೀಗೆ-

''ಕಾವ್ಯಯೋಗವೆಂದರೆ ಕವಿಯ ಕರ್ಮಯೋಗ. ಕರ್ಮ ಕುಶಲತೆಗೆ ಯೋಗ ಎಂದು ಹೆಸರು. ಸಹೃದಯರಿಗೆ, ರಸಿಕರಿಗೆ ಆನಂದವನ್ನು ಹಣಿಸಲು ಇರಿಸಿದ ಅರವಟ್ಟಿಗೆ ಎಂದರೆ ಕಾವ್ಯ, ನಮ್ಮನ್ನು ಹಿಗ್ಗಿಸುವುದು ಕಾವ್ಯಯೋಗ. ಕವಿಯ ಅಂತರಂಗಯೋಗ ರಸವಿದ್ಯೆ; ಕವಿಯ ಕರ್ಮ ಕಾವ್ಯ ಸೋಪಾನ. ಕಲೆಯ ಸಾಮಾನ್ಯ ನಿಯಮ-ಸಾಹಿತ್ಯವಿದ್ಯೆ ಮತ್ತು ಕವಿಯ ಬಹಿರಂಗ ಲೀಲಾಯೋಗ-ಕವನಸೃಷ್ಟಿ. ಇದು ಶಬ್ದ, ಇದು ಛಂದ, ಇದು ಭಾವ, ಇದು ಧ್ವನಿ ಎಂದು ಬಿಡಿಬಿಡಿಯಾಗದೆ, ಇಡಿಯಾಗಿ ವ್ಯವಹಾರದ ಕನ್ನಡಿಯಲ್ಲಿ ಮೂಡುವ ಪರಮಾರ್ಥದ ''ಪ್ರತಿಬಿಂಬ'' ಕಾವ್ಯ. ಇಂಥ ಕಾವ್ಯ ಸೂತ್ರಗಳನ್ನು ಬೇಂದ್ರೆಯವರು ಸೃಷ್ಟಿಸಿ, ಕಾವ್ಯಕಲೆಯ ಪದರು ಪದರು ಬಿಡಿಸಿ ತೋರಿಸಿದ್ದಾರೆ.

''ಪ್ರಪಂಚದಲ್ಲಿ ಐದು ಒಂದಾಗುತ್ತವೆ. ಪುರುಷರಲ್ಲಿ ನಾಲ್ಕು ಒಂದಾಗುತ್ತವೆ. ಶಕ್ತಿಯಲ್ಲಿ ಮೂರು ಒಂದಾಗುವುದು ಕಾವ್ಯ-ಧರ್ಮ-ಶಬ್ದ, ಛಂದ ಮತ್ತು ಧ್ವನಿ. ಸಹೃದಯರು ಕಾವ್ಯಾಂತರಂಗವನ್ನು ದೂರದರ್ಶಕದಿಂದ ನೋಡಬೇಕು, ಸೂಕ್ಷ್ಮದರ್ಶಕದಿಂದ ವಿಸ್ತರಿಸಬೇಕು, ಶಬ್ದವೇ ಕಾವ್ಯ. ಅದು ದೇವರ ನಾಮ, ಮಂತ್ರ. ಛಂದದೊಂದಿಗೆ ಭಾವ-ಬುದ್ಧಿಯ ಪ್ರಜ್ಞೆಯ ನೆಲೆಯೂ ಬೆಳೆಯಬೇಕು'' ಭಾವಗಳ ಸೋಪಾನವೇರದೆ, ನೆಲಕ್ಕೇ ಒರಗಿದರೆ ಯಾವ ಉನ್ನತಿಯನ್ನು ಒಂದು ದೇಶ, ಭಾಷೆ, ಜನ ಕಂಡೀತು? ಕವಿಯ ಸ್ವಯಂಭುತ್ವ, ಸದ್ಭಾವ, ಪ್ರಭಾವ, ವಿಭಾವ, ಅಹಂಭಾವ ಈ ಭಾವಗಳ ಭಾಂಡ ಕಾವ್ಯದ ಪಂಚಪಾತ್ರೆ. ನಭದ ಚೌಕಟ್ಟಿನಲ್ಲಿ ಭಗನ ಸೌಂದರ್ಯ-ಮೂರ್ತಿಯ ವಿಲಾಸವನ್ನು ಕಣ್ಣಿಗೆ ಎಟಕುವ ನಿಲುವಿನಲ್ಲಿ ತರುವುದು ಕಾವ್ಯ.

ಇದು ಮಹಾದೃಶ್ಯ. ಈ ದರ್ಶನಕ್ಕೆ ತಕ್ಕ ಶ್ರುತಿಬೇಕು. ಛಂದದ ಚೌಕಟ್ಟಿನಲ್ಲಿ ಶ್ರುತಿಯನ್ನು ತರಂಗಗೊಳಿಸುವುದು ಇನ್ನೊಂದು ತಂತ್ರ. ನಾಟಕ ಕೃತಿ; ಕಾವ್ಯ ಶ್ರುತಿ. ಶುದ್ಧಬುದ್ಧಿ ಹೃದ್ಯಭಾವಗಳ ಸಹಿತತ್ವವೇ ಸಾಹಿತ್ಯ. ಕ್ಷೇತ್ರಜ್ಞನಾದ ಚೈತ್ಯಪುರುಷನ ಸೂತ್ರಮಯ ಅಂತರ್ಯಾಮಿಕತೆ ಬೇಕು, ಅವನ ಉದ್ಭವ ಸಾಲದು, ಅವತರಣ ಬೇಕು. ಆಗ ಸಾಹಿತ್ಯದ ವಿರಾಟ್ ಶಕ್ತಿಯ ವಿಶ್ವರೂಪ ದರ್ಶನದಲ್ಲಿ ''ಏಕಂಸತ್''ನ ಸಂಪತ್ತಿಯನ್ನೂ, ವೈಭವವನ್ನೂ ಸೂರೆಮಾಡುವುದು. ಇದು ಸಹೃದಯ ತಂತ್ರ. ಈ ಅವತರಣಿಕೆಯ ವಿವರ ಬೇಂದ್ರೆ ರಚಿತ ೧೯೬೨ರಲ್ಲಿ ಪ್ರಕಟವಾದ ಕಾವ್ಯತಂತ್ರ ಚತುರ್ಮುಖ ಅಧ್ಯಾಯದಲ್ಲಿದೆ.

ಈ ಎಲ್ಲ ಅವತರಣಿಕೆಗಳನ್ನು ಅನುಲಕ್ಷಿಸಿದಾಗ, ಬೇಂದ್ರೆ ಕಾವ್ಯಸೃಷ್ಟಿಯಲ್ಲಿ ಒಂದು ನಿಶ್ಚಿತವಾದ ಬೆಳವಣಿಗೆ ಇದೆ ಎಂಬುದು ಕಂಡುಬರುತ್ತದೆ. ಬೇಂದ್ರೆಯವರ ಒಟ್ಟು ಕಾವ್ಯಸೃಷ್ಟಿಯಲ್ಲಿ ಎಂಟು ಹಂತಗಳನ್ನು ನಾನು ಇಲ್ಲಿ ಸೂಚಿಸಬಯಸುತ್ತೇನೆ. ಅವು ಹೀಗೆ-

೧) ೧೯೧೪ರ ಪೂರ್ವದಲ್ಲಿ ಬೇಂದ್ರೆ ಇಂಗ್ಲಿಷ, ಸಂಸ್ಕೃತ, ಮರಾಠಿ ಮತ್ತು ಕನ್ನಡದಲ್ಲಿ ವಿನೋದಕ್ಕಾಗಿ ಕವನಗಳನ್ನು ರಚಿಸುತ್ತಿದ್ದರು. ಗೆಳೆಯರಲ್ಲಿ ಓದಿ ತೋರಿಸುತ್ತಿದ್ದರು. ಈ ಕವನಗಳ ನೋಟುಬುಕ್ಕು ಬೇಂದ್ರೆಯವರು ಯಾವುದೋ ಆವೇಶದಿಂದ ನಡೆಯುತ್ತಿರುವಾಗ ಕೈಯಿಂದ ಜಾರಿ ನದಿಯಲ್ಲಿ ಬಿದ್ದು ಹೋಗಿಬಿಟ್ಟಿತು ಪುಣೆಯಲ್ಲಿ. ಇದು ಕಾವ್ಯವಿನೋದಕಾಲ.

೨) ೧೯೧೮ರ ಅನಂತರದಲ್ಲಿ 'ಓಂ ನಲ್' ಮಂತ್ರದ ಮಹತ್ವವನ್ನು ಅರಿತು, ಸಾಹಿತ್ಯ ಇದು ವ್ಯಕ್ತಿಸಾಧನೆಯೂ ಆಗಬಹುದು, ಸಮೂಹಸಾಧನೆಯೂ ಆಗಬಹುದು ಎಂದು ಬೇಂದ್ರೆ ಖಚಿತಪಡಿಸಿಕೊಂಡರು. 'ಗೆಳೆಯರ ಗುಂಪು' ರಚನೆಗೊಂಡಿತು; ಲಯವನ್ನೂ ಪಡೆಯಿತು. ಇದರ ಕಾಲಾವಧಿ ೧೯೧೫-೧೯೩೩. ಈ ಅವಧಿಯಲ್ಲಿ ಬೇಂದ್ರೆಯವರು ತನ್ನಲ್ಲಿರುವ ಅಸಾಮಾನ್ಯ ಕವಿತ್ವ ಶಕ್ತಿಯನ್ನೂ ಸಾಕ್ಷಾತ್ಕರಿಸಿಕೊಂಡರು. ತಾನು ಮತ್ತು ತನ್ನಲ್ಲಿ ಕಾರ್ಯಮಾಡುವ ಕವಿತ್ವಶಕ್ತಿಯನ್ನು ಕುರಿತು ಬೇಂದ್ರೆಯವರು ಅನೇಕ ಕವನಗಳನ್ನು ಸೃಷ್ಟಿಸಿದ್ದಾರೆ. ಆದುದರಿಂದ ಈ ಕಲಾವಧಿಯನ್ನು ಆತ್ಮಚಿಂತನೆಯ ಕಾಲ ಎಂದು ನಾನು ಗುರುತಿಸಿರುವೆ. ಬೇಂದ್ರೆ ಕಾವ್ಯದ ಗುರಿಗಳು ಎರಡು:

   i) ತನ್ನ ಕಾವ್ಯ ಸಾಮುಛಂದಸ್ಸಿನಲ್ಲಿಯೂ ಅಭಿವ್ಯಕ್ತವಾಗಬೇಕು
   (ಗರಿ : ಹಸೀ ಹಂಬಲ)

   ii) ಈ ಬಾಳಿನ ಗುಟ್ಟನ್ನು ಶಬ್ದದಲ್ಲಿ ಹಿಡಿದಿಡಬೇಕು,· ಸಂಖ್ಯೆಯಿಂದ ಅಳೆದು ತೋರಿಸಬೇಕು. (ಮೂರ್ತಿ, ಕಾಮಕಸ್ತೂರಿಯ ಪ್ರಸ್ತಾವನೆ.)

೩) ೧೯೩೪ರಿಂದ ೧೯೪೫ರವರೆಗೆ ಕಾವ್ಯವೆಂದರೆ ಕವಿಯ ಮನಸ್ಸಿನ ಉದ್ಯಾನದಲ್ಲಿ ಅರಳುವ ಮಂದಾರ ಕುಸುಮ. ಈ ಕಾಲಾವಧಿಯಲ್ಲಿ ಸೃಷ್ಟಿಯಾದ 'ನಾದಲೀಲೆ', 'ಸಖೀಗೀತ', 'ಮೇಘದೂತ' ಬೇಂದ್ರೆ ಕಾವ್ಯವಾಚಕರನ್ನು ಮೋಹಗೊಳಿಸಿತು

೪) ೧೯೪೬ ರಿಂದ ೧೯೫೬ರ ವರೆಗೆ ಬೇಂದ್ರೆ ಜೀವಾನಾನುಭವ ಅನೇಕ ಸಿಹಿ ಮತ್ತು ಕಹಿಯಿಂದ ಕೂಡಿ, ಸಾಧುಗಳ ಸಾಮಿಪ್ಯದ ಮೂಲಕ, ಕಾವ್ಯವೆಂದರೆ ಉತ್ಯೋಗ-ಕಾವ್ಯೋದ್ಯೋಗ ಎಂಬ ನಿಲುವನ್ನು ತಲುಪಿತು.

೫) ೧೯೫೬ ರಿಂದ೧೯೫೯ರ ವರೆಗೆ ಬೇಂದ್ರೆಯವರಿಗೆ ತನ್ನ ಕಾವ್ಯದಲ್ಲಿ ಮಂತ್ರಶಕ್ತಿಯು ಪ್ರವೇಶವಾಗುತ್ತಿದೆ ಎಂಬ ಅನುಭಾವ ಬಂದಿರಲು ಸಾಕು. ಆದುದರಿಂದ ಬೇಂದ್ರೆಯವರು ''ಇಲ್ಲಿ ಬೇರೆ ಕುಡಗಳು ಕುಲುಮೆಯಲ್ಲಿವೆ. ಇಲ್ಲಿ ಕಾವ್ಯದ ಕಮ್ಮಟ''- (ಸಂಚಯ) ಎಂದಿದ್ದಾರೆ.

೬) ೧೯೬೦ ರಿಂದ ೧೯೭೪ ರ ವರೆಗೆ ಬೇಂದ್ರೆಯವರ ಕಾವ್ಯ ಸದ್ಭಾವದ ನಿಲುವನ್ನು ತಲುಪಿದಂತಿದೆ.

''ಕೊಂಬೆಕೊಂಬೆಯಲಿ ರೆಂಬೆರೆಂಬೆಯಲಿ
ಬೇರೆ ಬೇರೆ ಹೂವು
ಮೂಲ ಒಂದು, ಹಲ ಸರ್ವನಾಮ
ಆ ತಾವು, ನಾವು, ನೀವು''
''ಅಂಕಿತಕ್ಕೆ ಅಂಕಿತತೆ ಇರಲಿ
ಸದ್ಭಾವ ಮುದ್ರೆ ಬೇಕು''

ಈ ಕಾಲಾವಧಿಯಲ್ಲಿ ಬೇಂದ್ರೆ ಕಾವ್ಯ, ಮಂತ್ರಶರೀರಧಾರಿಯಾಗಿ, ಕವನಶಿಶುಗಳ ಜನನಕ್ಕೆ ಕಾರಣವಾಗಿದೆ. ಬೇಂದ್ರೆ ಸದ್ಭಾವಕಾವ್ಯಮಾರ್ಗದ ಕೆಲವು ಲಕ್ಷಣಗಳನ್ನು ಹೀಗೆ ವಿವರಿಸಬಹುದು.

(೧) ಸಾಮಛಂದಸ್ಸಿನಲ್ಲಿ ಅಭಿವ್ಯಕ್ತಿ
(೨) ಶಬ್ದಕ್ಕಿಂತ ಭಾವಕ್ಕೆ ಮತ್ತು ಧ್ವನಿಗೆ ಮಹತ್ತ್ವ
(೩) ಕವನ, ಕವಿಯ ಕೃತಿಯಾಗದೆ; ಶ್ರುತಿಯಾಗುವಿಕೆ.

೭) ೧೯೭೪ ರಿಂದ ೧೯೮೧ರ ಅವಧಿಯಲ್ಲಿ ಬೇಂದ್ರೆಕಾವ್ಯ ಉದ್ಭವ ಲೋಕವನ್ನು ತಲುಪಿತು. ಈ ಉದ್ಭವಲೋಕದಲ್ಲಿ ಶಬ್ದಕ್ಕಿಂತ ಸಂಖ್ಯೆಗಳಿಗೆ ಮಹತ್ತ್ವ ಹೆಚ್ಚು. ೧೯೭೬ ರಲ್ಲಿ ಸೃಷ್ಟಿಯಾದ 'ಬಾಲಬೋಧೆ'ಯಲ್ಲಿ ಬೇಂದ್ರೆಯವರ ಜೀವನ ಮತ್ತು ಅವರು ಮಾಡಿದ ಸಂಖ್ಯಾಚಿಂತನ ಇವುಗಳ ಮಲಕು ಇದೆ. ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯದ ಶ್ರೇಷ್ಠ ಕವಿಗಳೆಲ್ಲ ಈ ಸ್ಥಿತಿಯನ್ನು ತಲುಪಿದ್ದಾರೆ. ಅವರ ಕಾವ್ಯದೊಳಗಿನ ಸಂಖ್ಯೆಗಳಿಗೆ, ಈ ಕಾಲದಲ್ಲಿ ಸಂಪೂರ್ಣ ಅರ್ಥ ಹೊಳೆಯುವದಿಲ್ಲ. ಕುರಾನ್ ಹಾಗೂ ಬೈಬಲ್‌ಗಳಲ್ಲಿಯೂ ಅನೇಕ ಸಂಖ್ಯಾ ರಹಸ್ಯಗಳಿವೆ. ವೇದ ವಾಙ್ಮಯದಲ್ಲಿಯಂತೂ ವಿಪುಲವಾಗಿ ಸಂಖ್ಯಾ ಸಂಕೇತಗಳಿವೆ. ಈ ಸಂಖ್ಯಾ ಸಂಕೇತಗಳ ಅರ್ಥ ಬೇಂದ್ರೆಯವರು, ಉದ್ಭವಕಾವ್ಯಮಾರ್ಗ ಪ್ರವೇಶಿಸಿದೊಡನೆ ಸ್ಫುರಿಸತೊಡಗಿತು. ಅಚೇತನದಲ್ಲಿ ಸಚೇತನದ ದರ್ಶನವಾಗುವದು ಈ ನೆಲೆಯ ಅನುಭಾವ.

೮) ಕಾವ್ಯೋದ್ಭವದ ಅನಂತರದಲ್ಲಿ ಕಾವ್ಯಾವತರಣ ಎಂಬ ನಿಲುವು ಪ್ರಾಪ್ತವಾಗುತ್ತದೆ. ಇದು ದಾಸರ, ಶರಣರ, ಸಂತರ ಕಾವ್ಯದ ರೀತಿ. ಇಂಥ ಅವತರಣ ಕಾವ್ಯ ೧೯೮೧ರ ಅನಂತರ ತಮ್ಮಿಂದ ಅಭಿವ್ಯಕ್ತವಾಗುತ್ತದೆ ಎಂಬ ಸ್ಪಂದನ ಬೇಂದ್ರೆಯವರಿಗಿತ್ತು. ಅದರ ಸಿದ್ಧತೆಯಲ್ಲಿ ಅವರು ತೊಡಗಿದ್ದರು. ಆದರೆ ೧೯೮೧ ರಲ್ಲಿಯೇ ಅವರು ನಿರ್ವಾಣ ಹೊಂದಿದರು.

ಬೇಂದ್ರೆಯವರ ಕಾವ್ಯ ಆರು ಮಗ್ಗಲುಗಳನ್ನು ಉಳ್ಳದ್ದಾಗಿದೆ. (೧) ಆತ್ಮ ಚಿಂತನೆ (೨) ಮಂದಾರ ಕುಸುಮ (೩) ಕಾವ್ಯೋದ್ಯೋಗ (೪) ಕಾವ್ಯ-ಮಂತ್ರ (೫) ಸದ್ಭಾವ (೬) ಉದ್ಭವ. ಅಂತೆಯೇ ಬೇಂದ್ರೆ ಕಾವ್ಯ ಸಮುಚ್ಚಯದ ಸ್ವರೂಪವೇ ೬ ಮುಖ ಉಳ್ಳ ಒಂದು

ಘನಾಕೃತಿ. ಇದು ಘನದ ಗುಣಲಕ್ಷಣಗಳುಳ್ಳ ಒಂದು ದಿವ್ಯ ಘನವಾಗಿದೆ ಎಂಬ ವೈಶಿಷ್ಟ್ಯವನ್ನು ನಾವು ಗಮನಿಸಲೇಬೇಕು. ಒಳಗೆ ಮತ್ತು ಹೊರಗೆ ಎಂಬ ಎರಡು ಮುಖಗಳ ಅದ್ವೈತ ದರ್ಶನದ ಅಷ್ಟಮುಖ ಅವತರಣ ಕಾವ್ಯ ಅವರ ಬಯಕೆ.

ಬೇಂದ್ರೆಯವರು ಜಾಗೃತಿಯಲ್ಲಿ ಅರ್ಥಕ್ಕೆ, ನಿದ್ರೆಯಲ್ಲಿ ಶಬ್ದ-ಅರ್ಥ-ಸಂಕೇತಕ್ಕೆ ಸ್ವಪ್ನದಲ್ಲಿ ಚಿತ್ರಕ್ಕೆ; ತುರೀಯದಲ್ಲಿ ನಾದ ಮತ್ತು ಛಂದಕ್ಕೆ ಮತ್ತು ತುರೀಯಾತೀತದಲ್ಲಿ ಶಬ್ದ ಹಾಗೂ ಸಂಖ್ಯಾಜ್ಞಾನಕ್ಕೆ ಮಹತ್ವಕೊಟ್ಟು, ಆ ಆ ಲೋಕಗಳಲ್ಲಿ ಸಂಚರಿಸಿ, ತಾವು ಅನುಭವಿಸಿದ ಸೊಗಸನ್ನು ಕನ್ನಡ ಕಾವ್ಯದಲ್ಲಿ ಅಭಿವ್ಯಕ್ತಪಡಿಸಿದ್ದಾರೆ.

The earliest formula of wisdom, to be its last-God, Light, Freedom, Immortality ಎಂಬ ಶ್ರೀ ಅರವಿಂದರ ಉಕ್ತಿಯಿಂದ ಬೇಂದ್ರೆ ಪ್ರೇರಣೆ ಪಡೆದರಾದರೂ, ಇವೆಲ್ಲವನ್ನೂ ತಮ್ಮದೇ ಆದ ಸಿದ್ಧಾಂತದ ಅಭಿವ್ಯಕ್ತಿಗೆ ಬಳಸಿಕೊಂಡು ಅದರಿಂದ ಹೊಸಬೆಳಕಿನ ಅನ್ವೇಷಣೆಗೆ ಹೊರಟದ್ದು ಗಮನೀಯ.

'ಸಾಹಿತ್ಯದ ವಿರಾಟ್ ಸ್ವರೂಪ' ಗ್ರಂಥದ ಮೊದಲನೆಯ ಅಧ್ಯಾಯ ಕವಿಚತುರ್ಮುಖ. ಇದರ ಕೊನೆಯ ಭಾಗ ಪುಟ ೫೫ ರಿಂದ ೬೨ರ ವರೆಗೆ ಬೇಂದ್ರೆಯವರು ಅವರ ಕಾವ್ಯಲೋಕದ ಹಿನ್ನೆಲೆ, ಪ್ರೇರಣೆಗಳು, ಅವರ ಕಾವ್ಯದ ಗುರಿ ಹಾಗೂ ಅವರ ಕಾವ್ಯದ ರೀತಿಯನ್ನು ಕುರಿತು ಕೆಲವು ಮಹತ್ವದ ಮಾತುಗಳನ್ನು ಬರೆದಿದ್ದಾರೆ. ಅವು ಹೀಗಿವೆ:-

"ಸಾಕ್ಷಿಕತೆ ಮತ್ತು ಈ ಪ್ರಪಂಚದ ಮಧ್ಯೆ ಕವಿಯ ಭಾವಸಮಾಧಿಯ ಗುಹೆ ಇದೆ. ಆನಂದಸ್ಪಂದಿ ಅಸ್ಮಿತೆ ನೆಲೆಗಾಣದಿದ್ದರೆ ನವೋನವ ಕಾವ್ಯಕ್ಕೆ ನಾಡಿಯೇ ಇಲ್ಲ. ಆ ಪರತತ್ತ್ವ ಸ್ಪರ್ಶವೇ ಗುರುಕೃಪೆ. ಅಖಂಡಿತವಾದ ಸಾಧನೆಯೇ ಜೀವನ. ಇದು ವ್ಯಕ್ತಿ ಅಹಂಕಾರದ ಮುಕ್ತಿಮಾರ್ಗವಲ್ಲ; ಸಾಂಘಿಕ, ಸಾಮಾಜಿಕ, ಮಾನವಜಾತಿಯ ನವಜನ್ಮದ ಹಾದಿ. ಬೇಂದ್ರೆನ ಭಾವದ ತಂತಿ ಮಿಡಿದಾಗ ಶಬ್ದ-ಅರ್ಥ-ಸಂಕೇತ ಇವುಗಳ ಕೇಂದ್ರೀಕರಣಕೃತಿಗೆ ಆಕೃತಿ ಕೊಡುತ್ತವೆ. ಅದರ ಸಾತತ್ಯದಿಂದ ಪ್ರಕೃತಿಜೊತೆಗೆ ವಿಕೃತಿಯಾಗದ ವಿಶೇಷ ಕೃತಿಯ ಸಂಭವ ಉಂಟಾಗುವುದು. ವಿರೋಧ ವಿಕಾರಗಳನ್ನು ವಿಶೇಷಕ್ಕೆ ಒಳಗಾಗಿಸುವ ಸಂಸ್ಕೃತಿಯೊಂದು ತಲೆಯಾಚೆಗಿಂದ ಎಂಬಂತೆ ಕಲಾತ್ಮಕತೆಯ ಸ್ಪರ್ಶ ಮಾಡುತ್ತದೆ. ಇಲ್ಲಿದೆ ಕಾವ್ಯಗಳ ಉದಯಾಸ್ತ. ಯಾರ ಚತುರ್ಮುಖತೆಗೂ ನೆಲೆ ಭಗವದ್ವಚನ. ವಿಷಯಗಳಾಚೆ ಇಂದ್ರಿಯಗಳಿವೆ; ಇಂದ್ರಿಯಗಳಾಚೆ-ಮನ; ಮನದಾಚೆ-ಬುದ್ಧಿ; ಬುದ್ಧಿಯಾಚೆಗೆ 'ಸಃ'. ರಸಃ-ರಸೋವೈಸಃ! ರಸೋಸ್ಮಿತೆಯ ಸಾಧನೆ- "ಅಂಬಿಕಾತನಯದತ್ತ ಕಾವ್ಯ".

ರಸಪುರುಷ-ಬಿಂಬ; ಸಾಕ್ಷಿಪುರುಷ ಪ್ರತಿಬಿಂಬ. ದೇವ-ಬಿಂಬ; ಜೀವ ಪ್ರತಿಬಿಂಬ. ಜೀವನು ಸರ್ವಸನ್ನಿವೇಶದಲ್ಲಿಯೂ ಪರಮಾತ್ಮನ ಆಭಾಸ ಎಂದು ನಿರ್ದಿಷ್ಟನಾಗಿರುವನು. "ಆಭಾಸ ಎಂದರೆ ಪ್ರತಿಬಿಂಬ. ಇದು ಪರಮಾತ್ಮನಿಂದ ದತ್ತವಾದ ಸತ್ತಾ ಉಳ್ಳದ್ದು" ಎಂಬ ಮಾತು ಮಧ್ವಾಚಾರ್ಯರ ದ್ವೈತವೇದಾಂತ ವಿಷಯದಲ್ಲಿ ಬರುತ್ತದೆ. ಮಧ್ವಾಚಾರ್ಯರ ಸಿದ್ಧಾಂತದಲ್ಲಿ ಮೀಮಾಂಸೆಯು-ಶ್ರವಣ, ಮನನ ನಿದಿಧ್ಯಾಸ ರೂಪ; ಇವುಗಳಲ್ಲಿ ಒಂದೊಂದೂ ಮತ್ತೊಂದರ ಸಾಧನ. ಇದೇ ಜ್ಞಾನ. ಈ ಜ್ಞಾನವು ಪರಮಾತ್ಮನಲ್ಲಿ ಸ್ನೇಹವನ್ನು ಹುಟ್ಟಿಸುವುದು. ಈ ಸ್ನೇಹಕ್ಕೆ ಭಕ್ತಿ ಎಂದು ಹೆಸರು. ಭಕ್ತಿಗೆ ಕಾರಣವಾದ ಜ್ಞಾನವು ಮೊದಲು ಪರೋಕ್ಷ; ಅಭ್ಯಾಸದಿಂದ ಅದರ ಪಕ್ವಸ್ಥಿತಿಯೇ ಅಪರೋಕ್ಷ. ಮತ್ತೊಂದು ಭಾವಕ್ಕೆ ಅವಕಾಶ ಕೊಡದೇ ತಾನೇ ತಾನಾಗಿ ಸದಾಸರ್ವದಾ ಇರುವುದೇ ಅಪರೋಕ್ಷ ಜ್ಞಾನದ ನಿರ್ದೋಷಾವಸ್ಥೆ. ಈ "ಆನು" ಲೋಕದಾಚೆ "ತಾನು" ಲೋಕ ಇದೆ. ಈ ಆನು ಮತ್ತು

ತಾನು ಮಾರ್ಗವಾಗಿ ಬೇಂದ್ರೆ ಕಾವ್ಯ ಹರಿದು ಬರುವುದರಿಂದ ಅವರು ಅವರ ಕಾವ್ಯ "ಅನು ತಾನಿನ ತನನನಾ" ಎಂದು ಕರೆದಿರುವುದನ್ನು ಗಮನಿಸಬೇಕಾಗುತ್ತದೆ.

ದಾಸಮಾರ್ಗದ ಪ್ರವರ್ತಕರಾದ ಮಹನೀಯರೆಲ್ಲರೂ ಅಪರೋಕ್ಷ ಜ್ಞಾನಿಗಳು ಎಂದರೆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವರು. ಇವರನ್ನು ಅವತಾರಿಪುರುಷರೆಂದು ಕರೆಯುವ ರೂಢಿ ಇದೆ. ಹನುಮ ಮತ್ತು ಭೀಮ ಅಂಶವು ಮಧ್ವಾಚಾರ್ಯರ ಜೀವನದಲ್ಲಿ ಕಾರ್ಯಮಾಡುತ್ತಿತ್ತು ಎಂದು ಸಂಪ್ರದಾಯಸ್ಥರು ಹೇಳುತ್ತಾರೆ. ಹನುಮತತ್ತ್ವ ಬೇಂದ್ರೆಯವರಲ್ಲಿಯೂ ಕಾರ್ಯ ಮಾಡುತ್ತಿತ್ತು ಎಂಬುದು ನನಗೆ ೧೯೮೪ರಲ್ಲಿ (ಬೇಂದ್ರೆಯವರ ನಿರ್ವಾಣದ ಅನಂತರ) ಲಕ್ಷಕ್ಕೆ ಬಂದ ಪ್ರಮುಖ ವಿಷಯವಾಗಿದೆ. ಬೇಂದ್ರೆ ಕಾವ್ಯ ಉಡುಪಿಯ ವಿದ್ವಾಂಸರಿಗೆ ಹೆಚ್ಚು ತಿಳಿಯಲು ಮತ್ತು ಪ್ರಿಯವಾಗಲು ಇದೂ ಒಂದು ಕಾರಣವಿರಲು ಸಾಕು ಎಂದು ನನ್ನ ಭಾವನೆ.

"ದೇಹಾ ಖಂಬಾ ಖಂಬಾ; ಜೀವಾ ಜೀವಾ ಪ್ರತಿಬಿಂಬಾ.
ಅದರೊಳಗೆ ದೇವದೇವನ ಬಿಂಬಾ ಲಕ್ಷ ಕೋಟಿ ತುಂಬಾ"
"ಪ್ರತಿಬಿಂಬಿತವಾಯ್ತೋ ಭಗ್ನನೇ
ಸ್ಮೃತಿ ಸಾರದ ಸಾತ್ವಿಕಲಕ್ನಾ"
"ಬಿಂಬಿಸುವಳು ಪ್ರತಿಬಿಂಬದಂತೆ ಅಂಗಾಂಗವಾಗಿ ಚೆಲುವು"

'ಪ್ರತಿಬಿಂಬದಿಂದ ಬಂತೇ ಪ್ರತಿಧ್ವನಿಯು?" ಎಂದು ಮೊದಲಾಗಿ ಅನೇಕ ಕಡೆಗೆ ಬೇಂದ್ರೆಯವರು ಬಿಂಬ ಮತ್ತು ಪ್ರತಿಬಿಂಬ ವಿಚಾರವನ್ನು ಮಂಡಿಸಿದ್ದಾರೆ. ನನ್ನ ಜೊತೆಗೂ ಬಿಂಬಾಪರೋಕ್ಷದ ವಿಷಯವಾಗಿ ಕೆಲವು ಮಾತುಗಳನ್ನಾಡಿದ್ದರು. ಇವುಗಳನ್ನೆಲ್ಲ ಗಮನಿಸಿ, ಬೇಂದ್ರೆಯವರ ಮರಣೋತ್ತರ ಪ್ರಕಟವಾಗುತ್ತಿರುವ ಈ ಐದನೆಯ ಕವನ ಸಂಕಲನಕ್ಕೆ ಪ್ರತಿಬಿಂಬಗಳು ಎಂದು ನಾನು ಹೆಸರಿಸಿರುವೆ.

ಜೈನರಿಗೆ ಬೇಂದ್ರೆಯವರ ಕಾವ್ಯ- ರತ್ನಾಕರನ ಭರತೇಶವೈಭವದಂತೆ ತೋರಿದರೆ; ವೀರಶೈವರಿಗೆ ಬೇಂದ್ರೆಯವರ ಕವಿತ್ವ ಹರಿಹರ, ಬಸವಣ್ಣ ಮತ್ತು ಅಲ್ಲಮಪ್ರಭುಗಳ ಮಾದರಿ ಎನಿಸುತ್ತದೆ. ಬೇಂದ್ರೆಯವರ, ಶಂಕರ ಪ್ರಣೀತ ವಿಷ್ಣು ಸಹಸ್ರದ ಒಲವು ಕಂಡವರಿಗೆ, ಬೇಂದ್ರೆ ಅದ್ವೈತಿ ಎನಿಸಿದರೆ; ಪ್ರತಿಬಿಂಬ ವಿಚಾರದ ಪುನರುಕ್ತಿಯನ್ನು ಅನುಲಕ್ಷಿಸಿ ಬೇಂದ್ರೆ ದ್ವೈತಿಗಳು ಎನಿಸದೇ ಇರದು. ಬೇಂದ್ರೆಯವರ ಕವಿ ಲಕ್ಷ್ಮೀಶ ಪ್ರೀತಿ ಬಲ್ಲವರು, ಬೇಂದ್ರೆಯವರು ವಿಶಿಷ್ಟಾದ್ವೈತಿಗಳಿರಬಹುದು ಎಂದು ಶಂಕಿಸುತ್ತಾರೆ. ಬೇಂದ್ರೆಯವರಿಗೆ ಎಲ್ಲ ಮತಕ್ಕಿಂತ ಕಾವ್ಯ ಶ್ರೇಷ್ಠ. ಅವರ ಅಭಿಪ್ರಾಯದಲ್ಲಿ-ವ್ಯವಹಾರದ ಕನ್ನಡಿಯಲ್ಲಿ ಪರಮಾರ್ಥದ ಪ್ರತಿಬಿಂಬವೇ ಕಾವ್ಯ. ಬೇಂದ್ರೆಯವರ ಜೀವನ ಶರಣ, ದಾಸ ಸದೃಶ ಜೀವನ. ಈ ಜೀವನಕ್ಕಾಗಿ ಅವರು ಅನುಸರಿಸಿದ ಮಾರ್ಗ - ಶ್ರೀಮಾತಾರವಿಂದ ಪ್ರಣೀತ ಪೂರ್ಣಯೋಗದ ಮಾರ್ಗ.

"ದಿವ್ಯ ಜೀವನದ ಅರಿವಿಗಾಗಿ ಪೂರ್ಣಯೋಗ ಸಾಧನೆಯೆ ಹೊರತು ಬೇರೆ ಯಾವುದೇ ಬಗೆಯ ಉದ್ದೇಶಕ್ಕಾಗಿ ಅಲ್ಲ. ಸಿದ್ಧಿ ಪಡೆಯಬೇಕು, ಯೋಗಿಯಾಗಬೇಕು, ಮೋಕ್ಷ ಪಡೆಯಬೇಕು ಮೊದಲಾದ ಉದ್ದೇಶ ಇಟ್ಟುಕೊಂಡವರಿಗೆ ಈ ಮಾರ್ಗವಲ್ಲ" ಎಂದು ಶ್ರೀ ಅರವಿಂದರು ಸ್ಪಷ್ಟಪಡಿಸಿದ್ದಾರೆ.

"ಜೀವನದಲ್ಲಿ-ಪ್ರೇಮ, ಜ್ಞಾನ, ಆನಂದ, ಶಕ್ತಿ ಮತ್ತು ಐಕ್ಯ ಎಂಬ ಐದು ಸಂಗತಿಗಳ ಕೊರತೆ ಇದೆ. ಈ ಕೊರತೆ ಇಲ್ಲದಂತೆ ಮಾಡಿಕೊಳ್ಳುವುದು ಪೂರ್ಣಯೋಗದಿಂದ ಸಾಧ್ಯ. ನಮ್ಮ

ಅಂತರಾತ್ಮಿಕತೆ ಅಚ್ಯುತವಾಗಿ ಉಳಿಯಬೇಕು ಎಂಬುದೆ ಮಾರ್ಗ. ಅಲ್ಲಿಂದ ಪಾರಮಾತ್ಮಿಕ ಪರಿಣತಿಯು ಪೂರ್ಣವಾಗಬೇಕು ಎಂಬುದೆ ಸಾಧನೆ. ಪ್ರಾಮಾಣಿಕ ಬುದ್ಧಿಯಿಂದ ಜ್ಞಾನದ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕು. ಪ್ರಾಪ್ತವಾದ ಜ್ಞಾನದ ಬಗ್ಗೆ ಸಂಶಯವನ್ನು ತಾಳಬಾರದು ಅಭ್ಯಾಸದಿಂದ ಶಕ್ತಿವಂತನಾಗಬೇಕು. ಶಕ್ತಿಯನ್ನು ಪಡೆದೂ ಹೊಸಬನಂತೆ ಗೊಂದಲಗೆಡಬಾರದು ಭಾವಶುದ್ಧಿಯಿಂದ, ಭಾವ ಸಿದ್ಧಿಯನ್ನು ಮುಟ್ಟಬೇಕು. ದುರಿತದ ತಿಮಿರ ನಾಶವಾಗಬೇಕಾದಾಗ ಸ್ವಧರ್ಮಸೂರ್ಯನ ಉದಯವಾಗಬೇಕು. ಆಗ ನಾವು ಜ್ಯೋತಿಯನ್ನು ಕರೆಯಬೇಕಾಗುತ್ತದೆ. ಕರೆದ ಮೇಲೆ ವಿರೋಧ ಮಾಡಬಾರದು, ಆ ಜ್ಯೋತಿ ಅವತರಣ ಮಾಡುವವರೆಗೆ ಕಾಯಬೇಕು. ಈ ನಿಷ್ಠೆ ಅವಧಾನ ಸಾಧಕನಲ್ಲಿ ಇರಬೇಕು. (ಸಾಹಿತ್ಯದ ವಿರಾಟ್ ಸ್ವರೂಪ ಪುಟ ೮೧೨ ರಿಂದ ೮೧೬) ಎಂಬ ಶ್ರೀ ಅರವಿಂದ ಉಪದೇಶ ಬೇಂದ್ರೆಯವರಿಗೆ ಒಪ್ಪಿಗೆಯಾಗಿದ್ದರಿಂದ, ಅವರು ಶ್ರೀ ಅರವಿಂದ ಪ್ರಣೀತ ಪೂರ್ಣಯೋಗದ ಸಾಧಕರಾಗಲು ಶ್ರಮಿಸುತ್ತಿದ್ದರೆ ಹೊರತು, ಸಂಪ್ರದಾಯಿಕ ಸಾಧು ಸತ್ಪುರುಷರ ಮಾರ್ಗವನ್ನಲ್ಲ. ಜಗತ್ತಿನ ಸಾಧು ಸತ್ಪುರುಷರ ಬಗ್ಗೆ ಬೇಂದ್ರೆಯುರಿಗೆ ಅಪಾರ ಗೌರವವಿತ್ತು. ಆದರೆ ಬೇಂದ್ರೆಯವರು ಯಾರ ಅನುಕರಣವನ್ನೂ ಮಾಡಲಿಲ್ಲ. ಬೇಂದ್ರೆಯವರ ಕೊನೆಯ ನಿಲುವು ಆದ, ಸಂಖ್ಯಾಶಾಸ್ತ್ರ ಜ್ಞಾನ ಅವರ ಸಾಧನ ಮಾರ್ಗದ ಒಂದು ಸಿದ್ಧಿಯಾಗಿತ್ತು. ದಿವ್ಯತ್ವದ ಅರಿವಿನ ಅವತರಣ ಇನ್ನು ಬೇಗನೆ ಅವರಲ್ಲಿ ಆಗಲಿತ್ತು ಎಂಬ ಸ್ಪಂದನಗಳು, ಅನುಭಾವಗಳು ಅವರಿಗೆ ಬರುತ್ತಿದ್ದವು. ಅಷ್ಟರಲ್ಲಿ ಅವರ ಇಹಜೀವನ ಮುಕ್ತಾಯಗೊಂಡಿತು.

ಅಪೋಜ್ಯೋತಿಯ ರಸಾಮೃತಕ್ಕಾಗಿ ಸಾಹಿತ್ಯ ಸಾಧನೆ ಮಾಡುವುದು, ಮಾನವ ಪ್ರಗತಿಯಲ್ಲಿ ಕ್ರಮಪ್ರಾಪ್ತ ದೈವೀಗಾಯತ್ರಿಯ ಮನನ ಈ ಸಾಧನೆಯ ಪ್ರಥಮ ಸೋಪಾನ. ೧೯೧೪ ರಿಂದ ೧೯೪೪ರ ಬೇಂದ್ರೆ ಜೀವನವು ಬೇಂದ್ರೆಯವರಿಂದ 'ಗಾಯತ್ರಿ' ಸೂಕ್ತ ರಚನೆಯನ್ನು ಮಾಡಿಸಿತ್ತು. ಕಾವ್ಯ ಎಂಬುದು ಉತ್+ಯೋಗ; ಮಂತ್ರಶಕ್ತಿ; ಸದ್ಭಾವ ಮತ್ತು ಉದ್ಭವ ಎಂಬ ನೆಲೆಗಳಿಗೆ ಬೇಂದ್ರೆಕಾವ್ಯ ಪ್ರಗತಿಯನ್ನು ಸಾಧಿಸುತ್ತ ಹೋಗಿ; ಅವತರಣ ಕಾವ್ಯ ಪ್ರತೀಕ್ಷೆಯಲ್ಲಿ ಬೇಂದ್ರೆ ಜೀವಿಸುತ್ತಿದ್ದರು ೧೯೮೧ರಲ್ಲಿ.

'ಪ್ರತಿಬಿಂಬಗಳು' ಈ ಕವನ ಸಂಗ್ರಹದಲ್ಲಿ ೧೯೫೪ ರಿಂದ ೧೯೭೪ರ ವರೆಗೆ ಇಪ್ಪತ್ತು ವರ್ಷಗಳಲ್ಲಿ ಬೇಂದ್ರೆಯವರಿಂದ ರಚಿತವಾದ ಕವನಗಳಿವೆ. ಈ ಕಾಲಾವಧಿಯಲ್ಲಿ ಬೇಂದ್ರೆಯವರು ಸಾಂಪ್ರದಾಯಿಕ ನಾಮಜಪ ಮತ್ತು ಶ್ರೀ ಅರವಿಂದ ಮಾರ್ಗದ ನಾಮ ಜಪ ಎರಡನ್ನೂ ಮಾಡುತ್ತಿದ್ದರು. ಈ ಎರಡರ ಉದ್ದೇಶ ಒಂದೇ-ದಿವ್ಯ ಮಾತೃಶಕ್ತಿಯ ಅವತರಣ, ಉದ್ಧರಣ ಕ್ರಿಯೆ ಪ್ರಾರಂಭವಾಗುವಿಕೆ. ''ಹೃದಯದಲ್ಲಿ ಧ್ಯಾನ ಮಾಡುವುದರಿಂದ ಸಾಕ್ಷಿಪುರುಷನ ಉದಯವಾಗಿ ಭಕ್ತಿ ಪ್ರೀತಿ ಮತ್ತು ಮಾತೃಕ್ತಿಯ ಅರಿವಾಗುತ್ತದೆ; ತಲೆಯ ಮೇಲೆ ಧ್ಯಾನ ಮಾಡುವುದರಿಂದ ಉನ್ಮುಖತೆ ಪ್ರಾಪ್ತವಾಗಿ, ಮೇಲಿನ ಲೋಕಗಳ ದರ್ಶನ ಮತ್ತು ಸಂಚಾರ ಪ್ರಾರಂಭವಾಗಿ, ಆತ್ಮ ಸಾಕ್ಷಾತ್ಕಾರದೆಡೆಗೆ ಮಾನವನ ಪ್ರಗತಿಯಾಗುತ್ತದೆ'' ಎಂದಿದ್ದಾರೆ, ಶ್ರೀ ಅರವಿಂದರು. ಈ ಎಲ್ಲ ಅನುಭವದ ಕವನಗಳು 'ಅರಳು ಮರಳು' ಸಂಗ್ರಹದಲ್ಲಿ ಪ್ರಕಟವಾಗಿವೆ. ಪ್ರತಿಬಿಂಬಗಳು ಕವನ ಸಂಗ್ರಹದೊಳಗಿನ ಕೆಲವು ಉಕ್ತಿಗಳು ಹೀಗಿವೆ-

೧) ಗೋವಿಂದನಲ್ಲ ಅರವಿಂದ ಬಂದ ಸತ್ಯಾತ್ಮನಾಗಿ ನಿಂದ.

೨) ಸದ್ಭಾವವೊಂದು ಎದೆಮಿಡಿತದಂತೆ ಓಂಕಾರ ಧ್ವನಿಸುತಿಹುದು
ಚಿತ್ತಚೇತನವು ಅರಿತುದನ್ನೆ ಮರೆತಂತೆ ನೆನೆಸುತಿಹುದು

ವಾಚ್ಯ ನಟಿಸಿತ್ತು ರಂಗಭೂಮಿಯಲಿ ಅನಿರ್ವಾಚ್ಯವಾಗಿ
ಸಾಕ್ಷಿ ಪ್ರೇಕ್ಷಕನ ಚಿತ್ತರಂಗದಲಿ ಹೃದಯಸೂಚ್ಯವಾಗಿ.

೩) ಬಂಜೆ ಹಂಚಿಕೆಗಿಹುದು ಪಾಳು ಬಯಲು ಸಮಾಧಿ
ಉದ್ಭವಕೆ ಎಡೆಕೊಡದ ಗತಭೂತಗಳ ಹಾದಿ.

೪) ಒಳಗಿನ ಕಿವಿಗೆ ಕೇಳಿಸಿದ್ದs ಮಂತ್ರಾ
ಹಾಂಗ ನಡಸೋದs ತಂತ್ರಾ
ಹಾಂಗ ನಡಯೋದs ಯಂತ್ರಾ

೫) ಬಿಂದು ಒಂದು ಬ್ರಹ್ಮಾಂಡ ಸಿಂಧು, ನೀ ನಿನ್ನ ದೃಷ್ಟಿಕೇಂದ್ರ
ಇದಂನಲ್ಲಿ ಮುಳುಗಿತ್ತು ಹಮ್ಮು, ಬಾನೆಲ್ಲ ಚಂದ್ರ, ಇಂದ್ರ

೬) ಬುದ್ಧ ಲಿಂಗವೇ ನಿದ್ದೆ ಹೋಗದಿರು ಪ್ರಾಜ್ಞನೆನಿಸಿಕೊಂಡು
ಹಿರಣ್ಮಯನೆ ಚಿನ್ಮೂರ್ತಿಯಾಗು, ಚೈತ್ಯಾಗ್ನಿ ಜನಿಸಿಕೊಂಡು

೭) ನಿದ್ದೆ ಎಚ್ಚರಗಳಲ್ಲಿ ಸತತ ಏಕಾಕಾರ
ಶರಣ ಪ್ರಪನ್ನತೆಗೆ ಸ್ಥಲಸ್ವೀಕಾರ

೮) ಜ್ಞಾನಪಿಂಡಕೋ ಸಚ್ಚಿದಾನಂದದೊಂದು ನೆಲೆಯು ಗೊತ್ತು.

೯) ಭವವು ಬೇಕು, ಅನುಭವವು ಬೇಕು, ಅನುಭಾವ ಬೇಕು ಒಳಗೆ
ಸಯಂಭುತ್ವದಾ ಜ್ಞಾನಬೇಕು, ಆ ಧೀ ಸಮಾಧಿ ಬೆಳಗೆ
ಮೂರು ಕಾಲಕೂ ನೂರುಕಾಲದಾ ಸೃಷ್ಟಿ-ದೃಷ್ಟಿ ಇರಲಿ
ಅಷ್ಟಸಿದ್ಧಿಗಳು ಅಷ್ಟತನುವೂ ಎನೆ, ಕಟ್ಟಿಕೊಂಡು ಬರಲಿ.

೧೦) ಜ್ಞಾನದಲ್ಲಿ ಆನಂದವಿರಲಿ, ಆನಂದದಲ್ಲಿ ಜ್ಞಾನ
ಬ್ರಹ್ಮಮಾನದಲಿ ಬ್ರಹ್ಮಗಾನದಲಿ ಬ್ರಹ್ಮಏಕತಾನ

ಮೊದಲಾದ ಉಕ್ತಿಗಳನ್ನು ಅಭ್ಯಸಿಸಿದಾಗ ಬೇಂದ್ರೆ ಕಾವ್ಯಸಾಧನೆಯ ಹಾದಿ ಸ್ಪಷ್ಟವಾಗುತ್ತದೆ. ಈ ಸಾಧನೆಯಿಂದ ಬೇಂದ್ರೆ ಅಪೇಕ್ಷಿಸಿದ್ದು ಹೀಗಿದೆ:..........

೧) ಇರು-ಅರಿ-ಹರಿಯೇ
ಮರೆಯಲೆ ತೆರೆಯೋ
ದೇವಜಗತ್ತಿನ ಸಂಧಿಯು ನೀ
ಜೀವ ಜೀವ ಸಂಬಂಧಿಯು ನೀ
ಬಂಧಿಯು ನೀ ಪ್ರತಿಬಂಧಿಯು ನೀ
ಒಂಟಿಗ ನೀ, ಜಗದಂಟಿಗ ನೀ
ರಸಪುರುಷನೇ ಬಾ; ಚಿತ್‌ಸಾಕ್ಷಿಯೆ ಬಾ
(ಇಲ್ಲಿ ಚಿತ್‌ಸಾಕ್ಷಿ=ಪ್ರತಿಬಿಂಬ; ರಸಪುರುಷ=ಬಿಂಬ)

೨) ಭಕ್ತಿಸಂವಿತ್ತೇ ಸುಸಮರ್ಪಣಾ; ಬೇಡ ಬೇರೆಯ ತರ್ಪಣ
ಭಗವದರ್ಪಣ, ಭಗವದರ್ಪಣ, ಇರಲಿ ಜೀವನ ದರ್ಪಣ
(ಜೀವನ ಕನ್ನಡಿಯಾಗಿ, ಅದರಲ್ಲಿ ಭಗವಂತನ ಪ್ರತಿಬಿಂಬ ಮೂಡಬೇಕು)

ಇಂಥ ಸಾಲುಗಳನ್ನು ಅನುಲಕ್ಷಿಸಿ, ಬೇಂದ್ರೆಯವರಿಗೆ ಕಾವಿಯ ಬಟ್ಟೆ ಕಾಣಿಕೆಯಾಗಿ ಒಬ್ಬ ಸಾಧುಗಳಿಂದ ಕೊಡಲಾಯಿತು. ಆಗ ಬೇಂದ್ರೆ, ತನ್ನ ಮಾರ್ಗವನ್ನು ಈ ರೀತಿ ನುಡಿದಿದ್ದಾರೆ:

೧) ''ಕಾವಿಯುಟ್ಟ ಕವಿ ನಾನು, ಕಾದು ಕೂತೇನಿ ಒಲಿಯ ಒಳಗ''

೨) ''ಕವಿಯ ಬಟ್ಟೆ-ಕಾವೀ ಬಟ್ಟೆ
ಅದನ್ನು ಉಟ್ಟೆ ಎಂದಿಗೂ
ಬಿಚ್ಚಿಬಿಟ್ಟೆ ದಾನ ಕೊಟ್ಟೆ
ಮುಗಿಲನೆಲ್ಲ ಮಂದಿಗೂ''

ಎಂದು ಸ್ಪಷ್ಟಪಡಿಸಿದ್ದಾರೆ. ಬೇಂದ್ರೆಯವರು ತಮಗೆ ಕೊಟ್ಟ ಕಾವಿ ಬಟ್ಟೆಯನ್ನು ಎಂದೂ ತೊಡಲೇ ಇಲ್ಲ ಎನ್ನುವುದು ಗಮನಾರ್ಹ. ಬೇಂದ್ರೆ ವಿರಕ್ತಿ ಪಂಥದವರಲ್ಲ, ಒಲವಿನ ಮಾರ್ಗ ಅವರದು.

ಕವಿಯ ಕಾರ್ಯ ಸಂಸ್ಕೃತಿಯ ಕಾರ್ಯ

''ಸಂಸ್ಕೃತಿ ಶೇಷನ ಸಹಸ್ರ ಹಣೆಗಳು
ಹೊತ್ತಿವೆ ಉದ್ಭವ ಭಾಗ್ಯ
ಯೋಗನಿದ್ರೆ ಆರೋಗ್ಯವಲ್ಲಬಿಡು
ಅಪಕ್ವವಾ ವೈರಾಗ್ಯ.''

ಎಂದು ಹೇಳಿದ ಬೇಂದ್ರೆ, ಶಬ್ದ ಕ್ರೀಡೆಯ ಆನಂದ ಹೇಗೆ ಪಡೆಯುತ್ತಿದ್ದರು ಎಂಬುದಕ್ಕಾಗಿ ಅವರು ಉಪಯೋಗಿಸಿದ "Dravidian Etymological Dictionary"ಯಲ್ಲಿ ನನಗೆ ದೊರಕಿದ ಸಾಲುಗಳನ್ನು ಕನ್ನಡ-ಕಣ್ಣು ಎಂಬ ಕವನವಾಗಿ ಸಂಗ್ರಹಿಸಿ ಕೊಡಲಾಗಿದೆ. ಈ ಅಭ್ಯಾಸದಿಂದ ಬೇಂದ್ರೆ, ಕಂಡುಕೊಂಡದ್ದು- ''ರವಿಗೆ ಕವಿಗೆ ಆ ಅಸ್ತ ಇಲ್ಲ; ಅವಗುಂಟು ಉದಯದುಂಡಿ''-ಹೀಗಾಗಿ ಬೇಂದ್ರೆಯವರಿಗೆ ಅನೇಕ ಮಂತ್ರ ಸಾಕ್ಷಾತ್ಕಾರಗಳಾದವು. ಅನೇಕ ಕವನಗಳ ಪ್ರಾರಂಭ ಅವರು ಸ್ವಪ್ನದಲ್ಲಿ, ನಿದ್ದೆಯಲ್ಲಿ ಮೂಡಿ, ಅನಂತರದಲ್ಲಿ ಆ ಕವನಗಳನ್ನು ಜಾಗೃತ ಅವಸ್ಥೆಯಲ್ಲಿ ಪೂರ್ಣ ಮಾಡುತ್ತಿದ್ದರು. ಅವರಿಗೆ ಬೇಕಾದದ್ದು ಅಪಕ್ವ ವೈರಾಗ್ಯದ ಯೋಗನಿದ್ರೆಯಲ್ಲ; ಅವರು ಬಯಸಿದ್ದು ಉದ್ಭವಲೋಕ ದರ್ಶನ. ೧೯೭೪ರ ಅನಂತರದಲ್ಲಿ ಬೇಂದ್ರೆಯವರಿಗೆ ಸಂಖ್ಯಾ ಜ್ಞಾನರೂಪದಲ್ಲಿ ಉದ್ಭವಲೋಕ ಸಂಚಾರ ಸಾಧ್ಯವಾಯಿತು. ಅಲ್ಲಿಯವರೆಗೆ ಅವರು ಸದ್ಭಾವ ಲೋಕದಲ್ಲಿದ್ದರು. ಆಗ

''ಕವಿಗೆ ಇದೆ ಎಲ್ಲ ಶ್ರುತಿ
ದಿವ್ಯಧ್ವನಿಯೆ ಮೂಲಕೃತಿ
ಜೊಲ್ಲು ಹೇಳಸಲ್ಲ''

ಎಂದು ಬೇಂದ್ರೆ, ಪ್ರತಿಜ್ಞೆಮಾಡಿ, ಅವರಿಗೆ ಅವರ ಕಾವ್ಯದ ಪ್ರತಿಭೆ ತೋರಿಸಿದ ಸದ್ಭಾವ ಲೋಕವನ್ನೆಲ್ಲ ಕವನಗಳಲ್ಲಿ ವರ್ಣಿಸಿದ್ದಾರೆ. 'ಪ್ರತಿಬಿಂಬಗಳು' ಸಂಗ್ರಹದ ಕವನಗಳು ಬೇಂದ್ರೆಯವರ ಸದ್ಭಾವಕಾವ್ಯ ಮಾರ್ಗದ ಸಂಚಾರ ಸೂಚಕಗಳೇ ಆಗಿವೆ. ವೇದ ಎಂದರೆ ಜ್ಞಾನ. ದೇವ

ಎಂದರೆ ಪ್ರಕಾಶ ಎಂಬ ನಿಲುವನ್ನು ಬೇಂದ್ರೆ ಈ ಕಾಲದಲ್ಲಿ ತಲುಪಿದರು. ವೇದ ಎಂದರೆ ಸಂಖ್ಯಾಜ್ಞಾನ ಮತ್ತು ದೇವ ಎಂದರೆ ಆನಂದ, ಪ್ರಕಾಶ ಎಂಬುದು ಅಂಬಿಕಾತನಯ`ಕಾವ್ಯ ತಲುಪಿದ ಕೊನೆಯ ನಿಲುವು. ಇದು ದಿವ್ಯ ಕಾವ್ಯಸೃಷ್ಟಿಸಿದ ದಿವ್ಯಜೀವನವೂ ಹೌದು.

ಬೇಂದ್ರೆಯವರು ಸದ್ಭಾವಲೋಕಕ್ಕೆ ಏರಿದಾಗ, ಅವರಲ್ಲಿ ಮಾತೃಶಕ್ತಿ ಕಾರ್ಯ ಮಾಡುತ್ತಿತ್ತು. ಅದೇ ಕವಿಯ ಪ್ರತಿಭೆ. ಇದನ್ನು ಮಾಹಾಕವಿ ಕಾಳಿದಾಸ ಗುರುತಿಸಿದ್ದನು. ಅದರ ಹೆಸರು ಈಶೆ. ಈ ಪ್ರತಿಭೆ, ಬೇಂದ್ರೆಯವರಲ್ಲಿ ಕಾರ್ಯಮಾಡಿದ ಬಗೆ-ಯಾರಾಕೆ ಮತ್ತು ಈಕೆ ಎಂಬ ಕವನಗಳಲ್ಲಿ ಅಭಿವ್ಯಕ್ತಗೊಂಡಿದೆ. ''ನೀನೂದು, ನಾನು ಓದುವೆ'' ''ಕೊಳಲು (ಕವಿ) ತಾನೇ ಕವನ ಮಾಡಲು, ಕೃಷ್ಣ ತಾನಿರಬೇಕಲಾ'' ''ಕಿವಿಯೆ ಇಲ್ಲಾ ಕವಿಯೆ ಇಲ್ಲಾ, ಬೊಬ್ಬೆಕುಟ್ಟ ಏನು?'' ಎಂಬಲ್ಲಿ ಬೇಂದ್ರೆಯವರು ತಮ್ಮಲ್ಲಿ ಪ್ರಕಟವಾದ ಶ್ರಾವಣ ಪ್ರತಿಭೆ ಎಂಬ ಮಾತೃಶಕ್ತಿಯನ್ನು ಗುರುತಿಸಿದ್ದಾರೆ. ಇದು ಅವರಿಗೆ ವೇದಾಭ್ಯಾಸದಿಂದ ಪ್ರಾಪ್ತವಾದ ಶಕ್ತಿ. 'ಕತ್ತೆ ವೇದಗಳನ್ನು ಹೇಳಿತು' ಎಂಬ ಒಂದು ಪವಾಡದ ವಿಷಯ ಮುರಾರಿ ಸಾಹಿತ್ಯದಲ್ಲಿ ಬರುತ್ತದೆ. ಈ ಪವಾಡಕ್ಕೆ ಬೇಂದ್ರೆಯವರು ಬೆಲೆ ಕೊಡದೆ; ಕವಿಯು ಶ್ರೋತ್ರೀಯನಾಗಬೇಕು, ಅವನ ಕಿವಿಗಳೇ ಕಣ್ಣಾಗಬೇಕು ಎಂದು ಅಪೇಕ್ಷಿಸಿದರು. ಹೀಗಾದಾಗ ಮಾತ್ರ ಕವಿಗೆ ವೇದಾರ್ಥಜ್ಞಾನ ಸಾಧ್ಯ The Rishis say in the Vedas that they heard the Truth by vision and inspiration-"Truth-hearing Seers" ''ಕವಯಃ ಸತ್ಯ ಶ್ರುತಃ'' Veda is Shruti got by inner hearing" ಎಂದಿದ್ದಾರೆ ಶ್ರೀ ಅರವಿಂದರು. ಬೇಂದ್ರೆಯವರು ವೇದಗಳಿಗೆ ಕೊಡುವ ಮಹತ್ತ್ವ ಅವರ 'ಅಗ್ನಿದಿವ್ಯ' ಮತ್ತು 'ಸೌಮ್ಯಮುಖವೆ ಚಂದಿರಾ' ಎಂಬ ಕವನಗಳಲ್ಲಿ ಸ್ಪಷ್ಟವಾಗಿದೆ.

ಭಾರತದ ಜನರು-'ಜನಾ ಕಾಯ್ತಾರ ದನಾ, ನೋಡ್ತಾರ ದಿನ ದಿನಾ, ಮಾಡ್ತಾರ ಅದರ್ಹಾಂಗ ಆಟಾऽऽ' ಎಂದೇ ನಡೆದುಕೊಂಡರೆ; ಭೀಷ್ಮರು ಶರತಲ್ಪದ ಮೇಲೆ ತೊಳಲಾಡಿದ ದುಃಖವೇ ಅವರ ಪ್ರಾಪ್ತಿ ಇದು ಯಕ್ಷ, ರಾಕ್ಷಸ, ಭೂತ ಮಾರ್ಗ. ಈ ಮೂರು ಅವಸ್ಥೆಯ ಕಾಟ ಗೆಲ್ಲಬೇಕಾದರೆ; ವಾ=ವಾಸುದೇವ, ವಿ=ವಿಟ್ಠಲ, ವೆ=ವೆಂಕಟ ಎಂಬ ನಕ್ಷತ್ರ ನಾಮಧಾರಿ ಶ್ರೀ ಕೃಷ್ಣನೇ ತಾರಕಶಕ್ತಿ. ಈ ಶಕ್ತಿಯನ್ನು ಪಡೆಯಲು ಭಾರತೀಯರು ''ದುಡಿಯಬೇಕಣ್ಣಾ, ಕಳೆಯಲು ದೈನ್ಯ'' ಎಂದು ಬೇಂದ್ರೆಯವರು-ಶ್ರೀಮನ್ ಮಾಹಾಭಾರತ, ಉದ್ಯೋಗಪರ್ವ ಮತ್ತು ಭೀಷ್ಮಪರ್ವ ಎಂಬ ಕವನಗಳಲ್ಲಿ ಸೂಚಿಸಿದ್ದಾರೆ.

''ವಶೀಲೆ ಅಲ್ಲಾ, ಬದುಕುವ ಶೀಲಾ
ಗುಣ ಕೌಶಲ್ಯ, ಬಾಳಿನ ಕೀಲಾ
'ಆರಾಮ ಹರಾಮು'
ಉದ್ಯೋಗ ಶರಣ; ಅವರಿಗಿಲ್ಲ ಮರಣ,
ದುಡಿಯುವವರೆ ಒಡೆಯರು,
ದುಡಿಯುವ ಬಡವರು
ನಾಡಿನ ಒಡೆಯರು.
ದುಡಿಯದ ಒಡೆಯರು
ಕಾಣದ ಹಾದಿಯ ಹಿಡಿವರು
ದುಡಿವರ ಒಡೆತನ ಬರಲಿ
ಉದ್ಯೋಗವೇ ಸಿರಿವಂತಿಕೆ''

ಎಂಬುದಾಗಿ ಬೇಂದ್ರೆ ಕಾವ್ಯ, ವ್ಯವಹಾರಿಕ ಜೀವನದಲ್ಲಿ, ದುಡಿಯುವ ಬಡವರ ರಾಜ
ಪ್ರಾರಂಭವಾಗಲಿ ಎಂದು ಹಾರೈಸಿದೆ.

'ಪ್ರತಿಬಿಂಬಗಳು' `ಕವನ ಸಂಗ್ರಹದಲ್ಲಿ ಒಟ್ಟು ೪೫ ಕವನಗಳಿಗೆ. ನನಗೆ ಇವು ಒಂದೇ ಕಡೆ
ದೊರಕಲಿಲ್ಲ. ಬೇಂದ್ರೆಯವರು ಓದಿದ ಪುಸ್ತಕಗಳ ಪ್ರತಿ ಪುಟಗಳನ್ನು ತಿರುವುತ್ತ ಹೋದಾಗ, ಸದ್ಯ
ದೊರಕಿದವುಗಳನ್ನು ಮಾತ್ರ ಪ್ರಕಟಣೆಗೆ ಅಣಿಗೊಳಿಸಿದೆ. ಕವನಗಳಿಗೂ ಮತ್ತು ಅವರು ಓದಿದ
ಪುಸ್ತಕಗಳಿಗೂ ಬಿಂಬ ಪ್ರತಿಬಿಂಬ ವಿಚಾರಗಳ ತಾಕಲಾಟ ಇದೆ. ಆದುದರಿಂದಲೂ ನಾನು ಈ ಕವನ
ಸಂಗ್ರಹಕ್ಕೆ 'ಪ್ರತಿಬಿಂಬಗಳು' ಎಂಬ ನಾಮಕರಣ ಮಾಡಿದೆ. ಎಷ್ಟೋ ಕವನಗಳಿಗೆ ತಲೆಬರಹಗಳ
ಇರಲಿಲ್ಲ. ಸೂಕ್ತವೆನಿಸುವ ತಲೆಬರಹಗಳ ರಚನೆಮಾಡಿದೆ. ಕೆಲವು ಪದ್ಯಗಳು ಅಪೂರ್ಣ ಸ್ಥಿತಿಯ
ಇದ್ದವು. ಅವುಗಳಿಗೆ ಕೆಲವು ಶಬ್ದ ಸಾಲು ಸೇರಿಸಿ ಪೂರ್ಣ ಮಾಡಿದೆ. ಇಂಥವುಗಳನ್ನು [
ಕಂಸಿನಿಂದ ಸೂಚಿಸಿರುವೆ. ಇವರಲ್ಲಿಯ ಒಂದೆರಡು ಕವನ ಧಾರವಾಡದ ಆಕಾಶವಾಣಿಯಿಂದ
ಹಾಡಿದ ಶ್ರೀ ಪಿ. ಆರ್. ಭಾಗವತ ಮತ್ತು ಪ್ರಕಟಿಸಿದ 'ತರಂಗ'ದ ಸಂಪಾದಕರಾದ ಶ್ರೀ
ಸಂತೋಷಕುಮಾರ ಗುಲ್ವಾಡಿಯವರಿಗೂ ನಾನು ಆಭಾರಿಯಾಗಿದ್ದೇನೆ.

೨೦-೯-೧೯೮೭ ಪ್ರೊ. ಕೆ. ಎಸ್. ಶರ್ಮಾ ಅವರ ೫೪ನೆಯ ಹುಟ್ಟುಹಬ್ಬ. ಪ್ರೊ. ಕೆ.ಎಸ್
ಶರ್ಮಾ ಅವರಿಗೆ ಬೇಂದ್ರೆಯವರೆಂದರೇ ದೇವ, ದೈವತ, ಪ್ರೇರಣೆ ಎಂಬುದು ಪ್ರಖ್ಯಾತವಾದ
ವಿಷಯ. ಬೇಂದ್ರೆಯವರ ೮೨, ೮೪ ಮತ್ತು ೮೫ ನೆಯ ಹುಟ್ಟುಹಬ್ಬವನ್ನು ಏಕಾಕಿಯಾಗಿ
ಏಕಲವ್ಯನಿಷ್ಠೆಯಿಂದ ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತ ಬಂದರು ಶರ್ಮಾ. ಆ ಕಾರ್ಯ ಹತ್ತ
ವರ್ಷಗಳಲ್ಲಿ ಪ್ರಗತಿಪಥದಲ್ಲಿದೆ. ಎಂಬಾರ್ ಭಾಷ್ಯಾಚಾರ್ಯ (ಶರ್ಮಾ ಅವರ ಪೂಜ್ಯ ತಂದೆ
ಅವರ ಪ್ರೇರಣೆಯಿಂದ ಅಂಬಿಕಾತನಯದತ್ತ ವೇದಿಕೆಯ ಸಹಕಾರದೊಂದಿಗೆ ಡಾ. ಕೆ
ರಾಘವೇಂದ್ರರಾವ್, ಪ್ರೊ. ಕೆ. ಎಸ್. ಶರ್ಮಾ ಮತ್ತು ಡಾ. ವಾಮನ ಬೇಂದ್ರೆ ಇವರ ಸಂಯುಕ್ತ
ಪ್ರಯತ್ನದ ಮೂಲಕ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಪ್ರಸಂಗದಲ್ಲಿ ಮೊಟ್ಟಮೊದಲನೆಯ
ಬೇಂದ್ರೆಯವರ ಇಂಗ್ಲೀಷ್ ಕವನಗಳ ಅನುವಾದಿತ ಪ್ರಾತಿನಿಧಿಕ ಸಂಗ್ರಹ-
''ಸ್ಪ್ರಿಂಗ್ ಫಾಯರ್''-ಪ್ರಕಟವಾಯಿತು. ಅದೇ ಬಗೆಯ ಧನ್ಯತೆ ಇಂದು 'ಪ್ರತಿಬಿಂಬಗಳು
ಕವನ ಸಂಗ್ರಹದ ಪ್ರಕಾಶನದ ಸಂದರ್ಭದಲ್ಲಿದೆ. ಈ ಕವನ ಸಂಗ್ರಹ ಪ್ರೊ. ಕೆ. ಎಸ್. ಶರ್ಮಾ
ಅವರ ೫೪ ನೆಯ ಹುಟ್ಟು ಹಬ್ಬದ ನಿಮಿತ್ತವಾಗಿ ಅಂಬಿಕಾತನಯದತ್ತ ವೇದಿಕೆಯ ಒಂದು ಕಿರ
ಕಾಣಿಕೆ ಎಂದೇ ನನ್ನ ಸ್ನೇಹ ಭಾವನೆ.

ಡಾ|| ವಾಮನ ಬೇಂದ್ರೆ,
ಸಹ ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

"ಬೇಂದ್ರೆ ಕುಟೀರ",
ಹುಬ್ಬಳ್ಳಿ - ೨೦
೧೮-೫-೨೦೦೭

ಕಾರ್ಯಸ್ಥಳ : "ಬೇಂದ್ರೆ ಕುಟೀರ", ವಿಶ್ರಾಮ ಚೇತನ, ಗೋಕುಲ ರಸ್ತೆ, ಹುಬ್ಬಳ್ಳಿ-೫೮೦ ೦೨೦. ದೂರವಾಣಿ : ೨೩೩೦೪೬೬

# ಮತ್ತೆ ಬೆಳಕು ಕಾಣುವ ಮುನ್ನ

''ಪ್ರತಿಬಿಂಬಗಳು'' ಮತ್ತೆ ಬೆಳಕು ಕಾಣುವ ಮುನ್ನ, ಈ ಕೃತಿಯ ಪ್ರತಿಬಿಂಬದರ್ಶನ ಮಾಡಿಕೊಡುವದು ಉಚಿತವೆಂದು ತಿಳಿದು ಈ ಕಾರ್ಯದಲ್ಲಿ ಉದ್ಯುಕ್ತನಾಗಿದ್ದೇನೆ. ವರಕವಿ ಡಾ|| ದ. ರಾ. ಬೇಂದ್ರೆಯವರ ಮರಣೋತ್ತರ ಕವನ ಸಂಕಲನವಾಗಿ ೧೯೮೭ರಲ್ಲಿ ಮೊದಲ ಮುದ್ರಣ ಕಂಡ ''ಪ್ರತಿಬಿಂಬಿಗಳು'', ಈಗ ಮತ್ತೆ ಬೆಳಕನ್ನು ಕಾಣುತ್ತಿದೆ. ''ಅರಳು ಮರಳು ನಂತರ ಅರಳಿದ ಕವನ ಸಂಕಲನಗಳು'' ಮಾಲಿಕೆಯಲ್ಲಿ ಇದರ ಪುನರ್ಮುದ್ರಣದ ಕಾರ್ಯವನ್ನು ಕೈಗೊಳ್ಳಲಾಗಿದೆ. ಈ ಕೃತಿಯ ಪ್ರಕಟಣೆ ಮರುಪ್ರಕಟಣೆಗಳಿಗೂ ನನಗೂ ಒಂದು ವೈಯಕ್ತಿಕ ಸಂಬಂಧವಿದೆ. ನನ್ನ ಹಾಗೂ ಗುರುವರ್ಯ ಬೇಂದ್ರೆಯವರ ಸಂಬಂಧದ ಕೊಂಡಿಯಾಗಿ ಒಂದೆಡೆ ಈ ಅನುಬಂಧ ಬಿಂಬಿತವಾಗಿದ್ದರೆ, ಇನ್ನೊಂದೆಡೆ ಇದು ನನ್ನ ಹಾಗೂ ಸಹೋದರ ವಾಮನ ಬೇಂದ್ರೆಯವರ ಅನುಬಂಧದ ಪ್ರತಿಬಿಂಬವಾಗಿದೆ ಎಂದರೆ ಅದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಈ ಕೃತಿಯ ಮೊದಲ ಆವೃತ್ತಿಯನ್ನು ೧೯೮೭ರಲ್ಲಿ ನನ್ನ ೫೪ನೆಯ ಹುಟ್ಟು ಹಬ್ಬದ ನೆನಪಿಗೆಂದು ಸಹೋದರ ವಾಮನ ಬೆಳಕಿಗೆ ತಂದಿದ್ದರೆ, ಈಗ ಮರು ಮುದ್ರಣವನ್ನು ನನ್ನ ೭೩ನೆಯ ವರುಷದಲ್ಲಿ ಹೊರತರುತ್ತಿರುವುದು ನನ್ನ ಆನಂದವನ್ನು ಇಮ್ಮಡಿಸುವುದರೊಡನೆ, ನನ್ನ ಹಾಗೂ ಗುರುವರ್ಯರ ಸಂಬಂಧದ ಒಂದು ಸಾರ್ಥಕತೆಯ ಸಂಕೇತ ಎಂದು ನಾನು ಭಾವಿಸಿದ್ದೇನೆ. ಇದಕ್ಕಾಗಿ ನಾನು ಗುರುರ್ಯರಿಗೆ ನನ್ನ ಆದರದ ಸಾವಿರದ ನಮನಗಳನ್ನು ಸಲ್ಲಿಸುವುದರೊಡನೆ, ಸಹೋದರ ವಾಮನ ಬೇಂದ್ರೆಯವರಿಗೆ ನನ್ನ ಅನಂತಾನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಗುರುವರ್ಯ ಬೇಂದ್ರೆಯವರ ಸೇವೆಯನ್ನು ನಿರಂತರವಾಗಿ ಸಲ್ಲಿಸುವ ಅವಕಾಶ ನನಗೆ ದೊರೆತಿರುವುದು ನನ್ನ ಸೌಭಾಗ್ಯವೆಂದೇ ನಾನು ಭಾವಿಸಿದ್ದೇನೆ. ಈ ಮಾತಿನೊಂದಿಗೆ ನನ್ನ ವೈಯಕ್ತಿಕ ಸಂಬಂಧಗಳ ಪ್ರಸ್ತಾವನೆಗೆ ಮಂಗಳವನ್ನು ಹಾಡಿ, ''ಪ್ರತಿಬಿಂಬಗಳು'' ಕೃತಿಯ ಆಂತರ್ಯದ ದರ್ಶನ ಪ್ರತಿಬಿಂಬಿಸಲು ತೊಡಗುತ್ತೇನೆ. ಇದಕ್ಕೂ ಮೊದಲು ಇನ್ನೊಂದು ಮಾತು. ಬೇಂದ್ರೆ ಸಂಶೋಧನ ಸಂಸ್ಥೆಯು ಡಾ|| ವಾಮನ ಬೇಂದ್ರೆಯವರ ಸಂಪಾದಕತ್ವದಲ್ಲಿ ವರಕವಿ ದ. ರಾ. ಬೇಂದ್ರೆಯವರ ಸಮಗ್ರ ಕಾವ್ಯವನ್ನು ''ಔದುಂಬರಗಾಥೆ'' : ವರಕವಿ ದ. ರಾ. ಬೇಂದ್ರೆ ಜೀವನ ಮಹಾಕಾವ್ಯ'' ಎಂಬ ಆರು ಬೃಹತ್ ಸಂಪುಟಗಳನ್ನು ಪ್ರಕಟಿಸಿದೆ. ಈ ಪ್ರಕಟಣೆಯು ವಿಶ್ವಸಾಹಿತ್ಯಕ್ಕೆ ವಾಮನ ಬೇಂದ್ರೆ ನೀಡಿರುವ ಒಂದು ವಿಶಿಷ್ಟ ಕಾಣಿಕೆ ಎಂದು ಹೇಳಬೇಕು. ಏಕೆಂದರೆ ಮಹಾಕಾವ್ಯಗಳ ಇತಿಹಾಸದಲ್ಲಿ ''ಜೀವನ ಮಹಾಕಾವ್ಯ'' ಒಂದು ವಿನೂತನ ಪ್ರಕಾರ. ಬೇಂದ್ರೆಯವರು ತಮ್ಮ ಸಮಗ್ರ ಕಾವ್ಯವೇ ''ಔದುಂಬರಗಾಥೆ''; ಅದೇ ತಮ್ಮ ಮಹಾಕಾವ್ಯ ಎಂದು ಹೇಳಿದ್ದರು. ಆದರೆ ಆ ಪರಿಕಲ್ಪನೆಯ ಚೌಕಟ್ಟಿನಲ್ಲಿ ಸಮಗ್ರ ಕಾವ್ಯ

ಬರುವಂತೆ ಅದನ್ನು 'ನಮನ', 'ದರ್ಶನ', 'ವಿಕಾಸ', 'ವಿನ್ಯಾಸ', 'ತತ್ವ' ಹಾಗೂ 'ಸಿದ್ಧಾಂತ
ಎಂಬ ಆರು ಸಂಪುಟಗಳಲ್ಲಿ ರೂಪಿಸಿರುವುದು ವಿನೂತನ ಸಂಶೋಧನೆಯ ಕಾರ್ಯ. ಅವರ
ಆರು ವರುಷಗಳ ಕಾಲ ಮಾಡಿದ ತಪಸ್ಸಿನ ಫಲ ಇದು. ಈ ರೀತಿಯಾಗಿ ಬೇಂದ್ರೆ ಸಮಗ್
ಕಾವ್ಯವನ್ನು ಪ್ರಕಟಿಸಿದ ನಂತರವೂ, ಬೇಂದ್ರೆಯವರ ಬಿಡಿ ಕವನ ಸಂಗ್ರಹಗಳ ಮರು ಪ್ರಕಟಣೆಯ
ಕಾರ್ಯವನ್ನು ನಾವು ಮುಂದುವರಿಸಿದ ಉದ್ದೇಶವೆಂದರೆ, ಯಾರಿಗೆ ಬಿಡಿ ಸಂಗ್ರಹಗಳ ಪ್ರತ್ಯೇ
ಆಸ್ವಾದನೆಯ ಶ್ರದ್ಧೆ ಹಾಗೂ ಆಸಕ್ತಿ ಇದೆಯೋ ಅವರ ಹಿತಾಸಕ್ತಿಯನ್ನೂ ಪೂರೈಸುವುದು
ಹೀಗೆಂದೇ ಅರಳು ಮರಳು ಅನಂತರದಲ್ಲಿ ಮರಳಿ ಅರಳಿದ ಕವನ ಸಂಗ್ರಹಗಳ ಮರು
ಮುದ್ರಣವನ್ನು ಕೈಗೊಂಡೆವು. ಈ ಮಾಲಿಕೆಯಲ್ಲಿ ''ಪ್ರತಿಬಿಂಬಗಳು'' ಮತ್ತೆ ಬೆಳಕನ
ಕಾಣುತ್ತಿದೆ. ಕನ್ನಡ ರಸಿಕರ ಬಳಗ ಇದನ್ನು ತುಂಬು ಹೃದಯದಿಂದ ಬರಮಾಡಿಕೊಳ್ಳುವರೆಂಬ
ವಿಶ್ವಾಸ ನಮ್ಮದಾಗಿದೆ.

ಈ ಮಾತುಗಳನ್ನು ಹೇಳಿ, ''ಪ್ರತಿಬಿಂಬಗಳು'' ಸಂಕಲನದ ಆಂತರ್ಯದ ದರ್ಶನವನ್ನು
ಬಿಂಬಿಸುವ ಕಾರ್ಯಕ್ಕೆ ತೊಡಗುತ್ತೇನೆ.

''ಯುಗಯುಗ ಕೇಳಿರಿ, ಸತ್ಯ ಅಂತ ಹೇಳಿರಿ
ಪುರುಷಾರ್ಥ, ಪುರಾಣ ಒಣಾ ಒಣಾ
ಕಣ್ಣೀನ್ಯಾಗ ತೊಯ್ದು, ಸಣ್ಣ ಸುಖದ ಒಣಾ ತುಕಡಿ
ತಿಂತನಽ ತಾಳೀರಿ ಎಷ್ಟು ದಿನಾ?
ಸತ್ಹ್ಹಾಂಗ ಬಾಳೀರಿ ಹ್ಯಾಂಗ ಜನಾ?''

- ಗೋಂದಾಜಿ ನಾಯಕನ ಲಾವಣಿ

ಬೇಂದ್ರೆಯವರು ಕೇಳುವ ಈ ಪ್ರಶ್ನೆ ಎಷ್ಟೊಂದು ಮಾರ್ಮಿಕವಾಗಿದೆ! ಯುಗ ಯುಗಗಳಿಂದ
ನಡೆದಿರುವುದೇ ಸಾಮಾನ್ಯ ಜನರ ಕಣ್ಣೀರಿನ ಕಥೆ. ಈ ದೀನರು ಒಣ ತುಕಡಿ ತಿನ್ನುತ್ತಾ, ಇದೇ
ಸುಖ ಎಂದು ತಿಳಿದು, ತಾಳಿ, ಬಾಳುತ್ತಿದ್ದಾರೆ. ಸತ್ಹ್ಹಾಂಗ ಬಾಳುತ್ತಿದ್ದಾರೆ. ಇದು ಬಾಳೇ ಅಲ್ಲ,
ಎದ್ದೇಳಿ ಎಂಬ ಕರೆಯನ್ನು ಬೇಂದ್ರೆ ಕೊಡುತ್ತಿದ್ದಾರೆ-

''ಶಾಂತಾ ನಮ್ಮ ದೇವಿ, ದುರ್ಗಾ ಆಗ್ಯಾಳ
ಆಗ ದೀನ ದುಃಖಿತರ ಧ್ವನಿ ಸ್ವರುಪಾ
ಎದ್ದಿಯಾ ನನ್ನ ತಮ್ಮ; ನಿದ್ದೀ ಮಾಡಬ್ಯಾಡಾ
ಗೆದ್ದ ಬರಬೇಕು ನಾವು ಇದೇ ವರುಷಾ''

- ಗೋಂದಾಜಿ ನಾಯಕನ ಲಾವಣಿ

ನಿದ್ದಿ ಮಾಡಬ್ಯಾಡ್ರಿ, ದೀನರು, ದುಃಖಿತರು ಎದ್ದೇಳಿ, ಗೆದ್ದು ಬರಬೇಕು ನಾವು ಇದೇ ವರುಷ
ಎಂಬ ಕರೆ ಸಮಯೋಚಿತವಾಗಿದೆ. ಇಲ್ಲಿ ಗಮನಿಸಬೇಕಾದ ಮಹತ್ತ್ವದ ಅಂಶವೆಂದರೆ
''ಶಾಂತಾ ನಮ್ಮ ದೇವಿ, ದುರ್ಗಾ ಆಗ್ಯಾಳ'' ಇದು ಹೋರಾಟದ ಸಂಕೇತ. ಯುಗ
ಯುಗಗಳಿಂದ ಪುರಾಣ, ಕಥೆ, ಕಾಲಕ್ಷೇಪಗಳ ಮಿಥ್ಯೆಯಲ್ಲಿ ಸಿಕ್ಕು, ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ
ದೀನ-ದಲಿತ-ದುಡಿಯುವ ಸಾಮಾನ್ಯರಲ್ಲಿ ಹೋರಾಟದ ಪ್ರಜ್ಞೆಯನ್ನು ಬಿತ್ತುವ ಈ ಲಾವಣಿಯಲ್ಲಿ

"ಸಜ್ಜಾಗಿ ಸ್ವಾತಂತ್ರ್ಯ ಭಂಗಾರಕ್ಕ
ಹೊಸ ಹೊಸ ಸಡಗರ ಸಿಂಗಾರಕ್ಕ
ಮಂಗಲ ಕಾಲಾ ಈಗ ಬಂದದ
ಇಂದ ಬಂದದ ನಮ್ಮ ಬಾಗಿಲಕ್ಕ"

- ಗೋಂದಾಜಿ ನಾಯಕನ ಲಾವಣಿ

ಎಂದು ಹೇಳಲಾಗಿದೆ. ಆದರೆ "ಗೋಂದಾಜಿ ನಾಯಕನ ಹಾಡಿನ ನುಡಿನುಡಿ ಶ್ರುತಿಗೇ ಖಡ್ಗದ ಖಣಾ ಖಣಾ" ಎಂದು ಹೇಳುವುದರ ಮೂಲಕ ನೊಂದವರು ಹೋರಾಟಕ್ಕೆ ಅಣಿಯಾಗಬೇಕು ಎಂಬ ಕ್ರಾಂತಿಕಾರಿ ಸಂದೇಶವನ್ನು ಕೊಡುತ್ತಾರೆ.

ಮೂಢನಂಬಿಕೆಗಳನ್ನು ತೊಡೆದು ಹಾಕುವ ಕುರಿತು ಒಂದು ಸೂಕ್ಷ್ಮಾವಲೋಕನವನ್ನು "ಯಾಕऽ ಅಂದರ ಯಾಕऽ?" ಎಂಬ ಕವನದಲ್ಲಿ ಬೇಂದ್ರೆ ಬಿಂಬಿಸುತ್ತಾರೆ.

"ಛೀ ಛೀ ಸಾಲಿ ಕಲ್ತು ನಮ್ಮ ತಲೀ ಹೊಲಸು ಆಗ್ಯಾವ
ಈ ಮಲಮೂತ್ರ ಶುದ್ಧಿಶಾಸ್ತ್ರ ನಮ್ಮ ತಲೀಗೆ
ತೂಗೋ ವಸ್ತು ಅಲ್ಲ"

ಎಂದು ಈ ಕವನವನ್ನು ಮುಗಿಸುತ್ತಾರೆ. ಈ ಕವನದಲ್ಲಿಯ ಘಟನೆಯೆಂದರೆ, ಆಚಾರ್ರು ಗೋಮಾ ತಿಂದು ಗೋಮೂತ್ರ ಮುಕ್ಕಳಿಸಿ ಶುದ್ಧಿ ಮಾಡಿಕೊಳ್ಳುವ ಮೂಢತೆಯನ್ನು ವ್ಯಂಗ್ಯ ಮಾಡಲಾಗಿದೆ.

"ಒಳ್ಳೆಯವರು ಕಾಣ್ತೇರಿ, ಗೋಮುಯಕ್ಕೆ ಸಿಕ್ಕಾಂಗ ಅಂದ್ರ ಯಾರರೇ,
ಬಾಯಾಗ ಸೆಗಣೀ ಹಾಕ್ಯಾರು!"
ಇರಲಿ, ಇಂಥಾ ಒಳ್ಳೆ ಕೆಲಸ ಮಾಡಿದವ್ರು ಕೆಟ್ಟ ಏನೋ
ತಿಂದಾವರ ಹಾಂಗ, ಬಾಯಿ ಯಾಕ ತೊಳಕೊಂಡರು?"

ಎಂಬ ಪ್ರಶ್ನೆಯನ್ನು ಕೇಳಿ, ಇದಕ್ಕೆ ಇವರು ಕೊಡುವ ಉತ್ತರವೆಂದರೆ, "ಬೂದಿ ಹಚ್ಚಿದ ಮ್ಯಾಲೆ ನೀರ ಹಾಕಿ ತೊಳಿಯೂದಿಲ್ಲऽ ದೇವರ ಉಪಕರಣಿ ಕೂಡ?" ಎಂದು ಹೇಳುತ್ತಾರೆ. ಇದೆಲ್ಲವೂ ಸ್ವಾರಸ್ಯಕರ ಮಾತುಗಳೇ ಆಗಿವೆ. ಶುದ್ಧ ಸ್ನಾನದಲ್ಲೇ ಶುದ್ಧ ಆದರೂ ಮಡೀ ಉಡೋದು ಅಂತ ಮ್ಯಾಲೆ ಬ್ಯಾರೆ ಇರೂದಿಲ್ಲೇನು?" ಎಂದು ಅವರು ಕೇಳುತ್ತಾರೆ. "ಸಾಲಿ ಕಲಿತ ತಲೀನ ಹೊಲಸು ಆಗ್ಯಾವ; ಅಂತ್ಲೇ ಈ ಮಲಮೂತ್ರ ಶುದ್ಧೀ ಶಾಸ್ತ್ರ ತೂಗೂದಿಲ್ಲ!" ಎಂದು ಉತ್ತರಿಸುತ್ತಾರೆ. ಈ ಕವನದಲ್ಲಿ ಅಂತರ್ಗತವಾಗಿರುವ ವ್ಯಂಗ್ಯ ಪರಂಪರಾನುಗತ ಮೂಢ ನಂಬಿಕೆಗಳಿಗೆ ಕನ್ನಡಿ ಹಿಡಿದಂತಿದ್ದು, ಈ ಮೂರ್ಖತನದ ಕೂಪದಿಂದ ಪ್ರಜ್ಞಾವಂತರು ಹೊರಗೆ ಬರಬೇಕೆಂಬ ಸಂದೇಶ ಓದುಗನಿಗೆ ಹೊಳೆಯದೇ ಇರಲಾರದು.

'ಎಲವು-ಸಂಸ್ಕೃತಿ' ಕವನದಲ್ಲಿ ಬೇಂದ್ರೆಯವರು ನಮ್ಮ ಇತಿಹಾಸಕಾರರು, ಪ್ರಾಚ್ಯವಸ್ತು ಶಾಸ್ತ್ರಜ್ಞರು, ನೆಲ ಅಗದು ಎಲವು ತೆಗೆದು, ಅದರಿಂದ ನಮ್ಮ ಹಿಂದಿನ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಪದ್ಧತಿಯನ್ನು ಅನುಸರಿಸುವ ಕುರಿತು ಪ್ರಸ್ತಾಪ ಮಾಡುತ್ತಾರೆ.

'ಹೃದಯವಿರದ ಎದೆ ಇದ್ದು ಏನು?'

ಎಂಬ ಪ್ರಶ್ನೆಯನ್ನು ಕೇಳುತ್ತಾರೆ. ಈ ಕವನದಲ್ಲಿಯ ಸಂದೇಶವು ಅತ್ಯಂತ ಮಾರ್ಮಿಕವಾಗಿದೆ:

''ಸಂಸ್ಕೃತಿ ಶೇಷನ ಸಹಸ್ರ ಹಣೆಗಳು
ಹೊತ್ತಿವೆ ಉದ್ಭವ ಭಾಗ್ಯ
ಯೋಗನಿದ್ರೆ ಆರೋಗ್ಯವಲ್ಲ ಬಿಡು
ಅಪಕ್ವವಾ ವೈರಾಗ್ಯ''

- ಎಲವು ಸಂಸ್ಕೃತಿ

ಶೇಷಶಾಯಿಯ ಮೇಲೆ ಯೋಗನಿದ್ರೆ ಮಾಡುವ ನಾರಾಯಣನಂತಾದರೆ ಸಂಸ್ಕೃತಿ ಅವನತಿಯ ಪಾಲಾಗಿ ಹೋಗುವುದರಿಂದ, ಅದು ಯೋಗ್ಯಕರವಲ್ಲ, ಅದು ಅಪಕ್ವ ವೈರಾಗ್ಯ ಎಂಬ ಎಚ್ಚರಿಕೆಯನ್ನು ಕೊಟ್ಟು ಕ್ರಿಯೋನ್ಮುಖರಾಗುವ ಸಂದೇಶ ನೀಡಲಾಗಿದೆ.

''ಬುದ್ಧಲಿಂಗ' ಕೂಡ ಬಹಳ ಮಹತ್ವದ ಸಂದೇಶವನ್ನು ನೀಡುತ್ತದೆ :

''ಆಕಾಶವೆಲ್ಲ ಅವಕಾಶವಾಗಿ ನಕ್ಷತ್ರರಾಶಿರಾಶಿ
ಆ ಲಕ್ಷ್ಯಲಿಂಗ ನಾ ಕೊರೆಯಬೇಕೆ ನಿಂತಲ್ಲೆ ವಾರಣಾಶಿ
ಮೂರು ಲೋಕಗಳ ಹೊಲೆದ ಗಂಗೆ ನನ್ನುಸಿರ ಅಂತರಗಂಗೆ
ಅಂದು ಇಂದು ಮುಂದೊಂದೆ ಜ್ಯೋತಿ ಉದ್ಭವಿಸಿತೀಗ ಭಂಗೆ
ಬುದ್ಧ ಲಿಂಗವೇ ನಿದ್ದೆ ಹೋಗದಿರು, ಪ್ರಾಜ್ಞನೆನಿಸಿಕೊಂಡು
ಹಿರಣ್ಮಯನೆ ಚಿನ್ಮೂರ್ತಿಯಾಗು, ಚೈತ್ಯಾಗ್ನಿ ಜನಿಸಿಕೊಂಡು''

ಗಂಗಾವತರಣದಲ್ಲಿ 'ಸತ್ತ ಜನರನ್ನು ಎತ್ತ ಬಾ' ಎಂದು ಗಂಗೆಯನ್ನು ಆಹ್ವಾನಿಸಿದ ಅಂಬಿಕಾತನಯದತ್ತರು, ಇಲ್ಲಿ ಗಂಗೆಯನ್ನು ''ನನ್ನುಸಿರ ಅಂತರಂಗೆ'' ಯನ್ನಾಗಿಸಿಕೊಂಡು ಭವಿತವ್ಯದಲ್ಲಿ ಅಭಂಗಜ್ಯೋತಿಯ ಉದ್ಭವವನ್ನು ಅಪೇಕ್ಷಿಸುತ್ತಾರೆ.

ಚೀನವನ್ನು ಕುರಿತು ಬರೆದ ''ಶ್ರೀಮನ್ ಮಹಾಭಾರತ'' ಅಭ್ಯಸನೀಯ ಕವನ. ಇಲ್ಲಿ ಭಾರತ ಹಾಗೂ ಚೈನಾ ಸಂಬಂಧಗಳ ಇತಿಹಾಸದಿಂದ ಪ್ರಾರಂಭಿಸಿ, ಅದಕ್ಕೆ ಭವಿಷ್ಯದಲ್ಲಿ ನೀಡಬೇಕಾದ ಎಚ್ಚರಿಕೆಯನ್ನು ಕೊಡುತ್ತಾರೆ. ಈ ಕವನದ ಪ್ರಾರಂಭದ ನುಡಿ ಹೀಗಿದೆ :

''ಎಲ್ಲೆ ಚೀನ, ಆಯ್ಯಾ ಎನ್ನುವೆ ದಮ್ಮಯ್ಯಾ
ಸ್ವರ್ಗದಾಸೆಯ ತೋರಿ ನರಕ ತರುವೆ
ಪಂಚಶೀಲದ ಮಾತನಾಡುತ್ತಾ ಆಡುತ್ತ
ಕೌಟಿಲ್ಯ ನೀತಿಯಲಿ ಬೆನ್ನನಿರಿವೆ''

ಆರನೆಯ ನುಡಿಯಲ್ಲಿ ಹೀಗೆ ಹೇಳುತ್ತಾರೆ :

"ಬುದ್ಧ ಭಾರತ; ದಾನ ಯುದ್ಧ ಕೊಡುವಿಯಾ?
ಪ್ರಾಚೀನ ಕರ್ಮ ಹತಬದ್ಧನಾದೆ
ಕಾನ್‌ಫ್ಯೂಸಿಯಸ್ಸಿಗೂ ಲಾವೋಸೆನಿಗೂ ಮತ್ತೆ
ಗೋರಿ ಕಟ್ಟಿಸಲಿಕ್ಕೆ ಸಿದ್ಧನಾದೆ.

ಈ ಕವನದ ಕೊನೆಯ ಸಾಲುಗಳು ಹೀಗಿವೆ :

"ಚಂದ್ರಹಾಸನ ದೈವಲೀಲೆ ಭಾರತಕಿಂದು
ದುಷ್ಟಬುದ್ಧಿಯ ಮಕರ ಹೃದಯ ನಿನಗೆ
ಚಂಡಿಕಾಲಯದಲ್ಲಿ ಕಾದಿಹುದು ನಿನ್ನ ವಿಧಿ
ದುರ್ಗೆ; ಕಾಲಿಯ ಬಲವು ನಮಗೆ ಕೊನೆಗೆ"

ಚೀನಾವನ್ನು "ದಾನಯುದ್ಧ ಕೊಡುವಿಯಾ?" ಎಂದು ಕೇಳುವ ವರಕವಿ ಅಂಬಿಕಾತನದತ್ತರ "ಚಂಡಿಕಾಲಯದಲ್ಲಿ ಕಾದಿಹುದು ನಿನ್ನ ವಿಧಿ ದುರ್ಗೆ; ಕಾಲಿಯ ಬಲವು ನಮಗೆ ಕೊನೆಗೆ" ಎನುತ್ತಾರೆ. ಕಾಲಿಯ ಬಲವನ್ನು ಅನಿವಾರ್ಯವಾಗಿ ಬಳಸಬೇಕಾಗತ್ತದೆ ಎಂಬ ಎಚ್ಚರಿಕೆಯನ್ನು ನೀಡಿರುವುದು ಗಮನಾರ್ಹ ಅಂಶವಾಗಿದೆ. ಇದು ಅಂಬಿಕಾತನಯದತ್ತರ "ಶ್ರೀಮನ್ ಮಹಾಭಾರತ".

"ದತ್ತಜ್ಞನ ವಚನಗಳು" - ಒಂದು ಮಹತ್ವದ ಪ್ರಯೋಗ ಕೃತಿ.

"ಅಲ್ಲಮನೊಡನಾಟ ಬೆಲ್ಲತಾನಾದಂತೆ
ಬಲ್ಲವನ ಬಾಳು ಹರಿವ, ತಾ ಶಿವದ
ಎಲ್ಲೆ ತಿಳಿದಂತೆ ದತ್ತಜ್ಞ

ಕರುಳೆ ಈಲ್ಲಲ ಕರುಣೆ?
ಬೆರಳು ಇಲ್ಲದ ಕರಣ!
ಹುರುಳು ವ್ಯಾಕರಣತಾನಲ್ಲ;
ಅರಳು ಮರುಳೆಂಬ ದತ್ತಜ್ಞ"

ಬೇಂದ್ರೆಯವರು ಅಲ್ಲಮನೊಡನಾಟ ಕುರಿತು ತಾಳಿದ ಮನೋಭಾವದ ಅಭಿವ್ಯಕ್ತಿ ಇಲ್ಲಿದೆ. ಈ ಒಡನಾಟದಿಂದ ಬಾಳಿನಲ್ಲಿ ಎಲ್ಲೆ ಇರದ ಆನಂದ ಪಡೆವ ಅಭೀಪ್ಸೆ "ದತ್ತಜ್ಞ"ನದು. ಈ ಅಂಬಿಕಾತನಯದತ್ತರ ಕಾವ್ಯ ಎಂದೆಂದೂ ಅರಳುತ್ತಾ ಮರಳುತ್ತಾ ಮರಳಿ ಅರಳುತ್ತಾ ಅಮರತ್ವವನ್ನು ಪಡೆಯುತ್ತದೆ. ಅದು ಅರಳು ಮರಳಿನ ಅವಸ್ಥೆಯ ಮರೆವು ಬೆಳೆಯುವ ಕಾವ್ಯವಲ್ಲ ಎಂಬ ಎಚ್ಚರಿಕೆ 'ದತ್ತಜ್ಞ'ನ ವಚನದ ಹಿರಿಮೆ.

''ಕನ್ನಡ ಕಣ್ಣು'' ಕವನದಲ್ಲಿಯ ಈ ಕೆಳಗಿನ ಸಾಲುಗಳು ಗಮನಾರ್ಹವಾಗಿವೆ :

''ಕಾವಿ ಹೊತ್ತು ಈಗ ಆಗ್ಯಾನ ಕವಿ
ಬಾಜಾರ ಮಾಲು ಅಲ್ಲ, ಹೃದಯ
(ಒಳಗಡೆಗೆ ಬಾರೋ, ಕಿವಿಗೊಟ್ಟು ಕೇಳೊ,
ನೀನೇ ನನ್ನ ಸಹೃದಯ
ಕಾವಿಯುಟ್ಟ ಕವಿ ನಾನು,
ಕಾದು ಕೂತೇನಿ ಒಲಿಯ ಒಳಗ
(ಉಫ್ ಎನ್ನು, ಕಂಡೀತು ಕೆಂಡ, ಬೆಂಕಿ ಐತಿ, ಬೂದಿಯಲ್ಲಿ ಕೆಳಗ)''

ಕವಿ ಕಾವಿ ಉಡುವ ಪ್ರಕ್ರಿಯೆ ಪೂರ್ಣಗೊಂಡಂತೆ, ಕಾವಿ ಉಟ್ಟು, ಒಲಿ ಒಳಗೆ ಕವಿ ಅಡಗಿಕೊಂಡು ಅಡಿಗೆ ಮಾಡಲು ಅವಶ್ಯವಾದ ಕೆಂಡವಾಗಿಹನು. ಸಹೃದಯ ಉಫ್ ಎಂದು ಊದಿ, ಆ ಕೆಂಡವನ್ನು ಪ್ರಜ್ವಲಗೊಳಿಸಬೇಕು. ಈ ಕವಿ ಹೃದಯ ಬಾಜಾರದಲ್ಲಿ ಮಾರಾಟಕ್ಕಿರುವ ವಸ್ತುವಲ್ಲ, ಅದು ವಿವೇಕದೊಡನೆ ಸಂಗಮಗೊಂಡು ನವಮಾನವ ಆವಿರ್ಭಾವಕ್ಕಾಗಿ ಕಾಯುತ್ತಿದೆ.

''ಉದ್ಯೋಗಶೀಲ'' ಕವನ ಅಂಬಿಕಾತನಯದತ್ತ'ರ ಧ್ಯೇಯದ ಉದ್ಘೋಷವನ್ನು ಬಿಂಬಿಸುವುದು ಹೀಗೆ-

''ದುಡಿಯುವ ಒಡೆಯರು
ನಾಡಿನ ಒಡೆಯರು;
ದುಡಿಯದ ಒಡೆಯರು
ಕಾಣದ ಹಾದಿಯ ಹಿಡಿವರು.
..............................
ದುಡಿವರ ಒಡೆತನ ಬರಲಿ
ಉದ್ಯೋಗವೆ ಸಿರಿವಂತಿಕೆ''

''ದುಡಿವರ ಒಡೆತನ ಬರಲಿ'' - ಈ ಕಾಲಕ್ಕಾಗಿ ನಾವೆಲ್ಲರೂ ಕಾಯೋಣ, ಅದಕ್ಕಾಗಿ ಪರಿಶ್ರಮಿಸೋಣ. ಅಂಬಿಕಾತನಯದತ್ತರ ನಾಳಿನಾ ನಾಳಿನಾ ಕನಸನ್ನು ನನಸಾಗಿಸೋಣ.

ಡಾ|| ಕೆ. ಎಸ್. ಶರ್ಮಾ
ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

''ಬೇಂದ್ರೆ ಕುಟೀರ'',
ಹುಬ್ಬಳ್ಳಿ - ೩೦
೧೮-೫-೨೦೦೭

ಕಾರ್ಯಸ್ಥಳ : ''ಬೇಂದ್ರೆ ಕುಟೀರ''. ವಿಶ್ವಶ್ರಮ ಚೇತನ, ಗೋಕುಲ ರಸ್ತೆ, ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

# ೧ ಅಲಕ್ಷ್ಯಸುಂದರ ಪ್ರತಿಬಿಂಬಗಳು

೧

ಅಲಕ್ಷ್ಯಸುಂದರ ಅಪೋರಸನನು
ಕಂಡು ಬೆರಗುಗೊಂಡ:
"ಇದ್ದಿಲಲ್ಲ ಇವ ರತ್ನಪಿಂಡ
ರಸರಸಿತನಾದ ಕೆಂಡ !

ಜೀವದಾಹವದು ಗೆದ್ದನಾರೊ
ತಾನಿದ್ದನಾರೊ ಕಾಣೆ
ಜಿದ್ದು ಯುದ್ಧ, ಇವನೇತ್ರ ಬುದ್ಧ
ಈ ಮಾತು ಜೀವದಾಣೆ.

ಹರಿದು ಹೋಗುವುದು ಯಾವ ರಸವು ಆ
ಜ್ಯೋತಿ ಅಮೃತವೆಂದೆ
ಅರಸನಲ್ಲ ಇವ ಸುರಸಮೂರ್ತಿ
ಇದಕಾಣಲೆಂದೆ ಬಂದೆ".

೨

ದಿವ್ಯನಾಕದಲಿ ದಿವ್ಯಲೋಕದಲಿ ದಿವ್ಯಪಾಕವಿದ್ಯೆ
ಶುದ್ಧರಸವೆ ಓ ಸಿದ್ಧರಸವೆ ಇರುವರಿವು ಹಿಗ್ಗಿ ಇದ್ದೆ
ದಿವ್ಯಸೂರ್ಯ ಎಚ್ಚರಿಸುತಿರಲು ಸುತ್ತೆಲ್ಲ ದಿವ್ಯ ನಿದ್ದೆ
ದಿವ್ಯಸ್ವಪ್ನ ಕಣ್ತೆರವಿ, ಮಾಡೆ ಅಹ ದಿವ್ಯಕಾಣಲಿದ್ದೆ.

೩

ಹರ ರುದ್ರನಲ್ಲ; ರಸ ಭದ್ರ ಬಂದ
ಆನಂದವನ್ನು ತಂದ
ಗೋವಿಂದನಲ್ಲ ಅರವಿಂದ ಬಂದ
ಸತ್ಯಾತ್ಮನಾಗಿ ನಿಂದ.

ದೇಮವ್ವನಲ್ಲ ಸೋಮವ್ವ ಈಕೆ
ತಾಯಾಗಿ ಇಳಿದಳಣ್ಣ
ದುರ್ಗವ್ವ ಅಲ್ಲ, ಸರ್ವಸ್ವ ಈಕೆ
ಪಡೆದುದನು ಹಡೆವಳಣ್ಣ.

೪
ಹಸಿವೆಯಾಗಿ ಬಂದಿತ್ತು ಬಸಿರಿನಲಿ ಹಸಿದು ವಿಶ್ವದನಲ
ಬಯಕೆಯಾಗಿ ಬೀಸಿತ್ತು ಒಲವು ತಾನಾಗಿ ಪ್ರಾಣನನಿಲ
ಬ್ರಹ್ಮಕರ್ಮ ಪ್ರತಿಸರ್ಗದಲ್ಲಿ ಬರೆ ತಾ ವಿಸರ್ಗವೆನಿಸಿ
ನೆಲದ ಒಲವಿನಲಿ ಚೆಲುವೆ ಹೂತಿತ್ತು ತಾ ನಿಸರ್ಗವೆನಿಸಿ.

೫
ಜೀವನಲ್ಲಿ ತುಂಬಿಹಳು ತಾಯಿ ತಾನಾಗಿ ದೇವನೊಲವು
ಮನೋರಾಜ್ಯವನು ನಂಬಿ ಆಳುವಳು ಅರಳಿ ಅರಿವಿನೊಳವು
ಚುಂಬಿಸುವಳು ತನ್ನತ್ತ ಎಲ್ಲ ಹೊಮ್ಮಿರಲು ಪ್ರಾಣಬಲವು
ಬಿಂಬಿಸುವಳು ಪ್ರತಿಬಿಂಬದಂತೆ ಅಂಗಾಂಗವಾಗಿ ಚೆಲುವು.

೬
ಇದ್ದುದೆಲ್ಲವೂ ತಿರುಳಿನೊಳವು, ಹಿರಿಬಲವು ಚೆಲುವು ಒಲವು
ನಿದ್ದೆ ತಿಳಿದು ಎದ್ದಾಗ, ಬೀಜವೇ ಮರವು ಹಲವು ಫಲವು
ಹಿಗ್ಗಿದಾಗ ಕಾಣುವುದು ಕಾಣದಾನಂದ ಮಗ್ನನಲ್ಲಿ
ಭೂಮವೆಂಬಂತೆ ಭೂಮಿ ಮೆರೆಯೆ ವಿಜ್ಞಾನಲಗ್ನದಲ್ಲಿ.

೭
ಸದ್ಭಾವದೊಂದು ಎದೆಮಿಡಿತದಂತೆ ಓಂಕಾರ ಧ್ವನಿಸುತಿಹುದು
ಚಿತ್ತಚೇತನವು ಅರಿತುದನ್ನೆ ಮರೆತಂತೆ ನೆನೆಸುತಿಹುದು
ವಾಚ್ಯನಟಿಸಿತ್ತು ರಂಗಭೂಮಿಯಲಿ ಅನಿರ್ವಾಚ್ಯವಾಗಿ
ಸಾಕ್ಷಿಪ್ರೇಕ್ಷಕನ ಚಿತ್ತರಂಗದಲಿ ಹೃದಯ ಸೂಚ್ಯವಾಗಿ.

- ರಚನೆ : ೯-೬-೧೯೫೯

---

ಭಾವ : ಸಾಕ್ಷಿ ಪ್ರೇಕ್ಷಕನ ಹೃದಯದಲ್ಲಿ ಅನುಭವಕ್ಕೆ ಬಂದ ಭೂಮಾನುಭೂತಿ.

ಶಬ್ದಾರ್ಥ : ಆ ಲಕ್ಷ್ಯಸುಂದರ=ಸೌಂದರ್ಯದ ಅನಂತರೂಪ. ಅಪೋರಸ=ನೀರಿನಂತೆ ಅಮೃತವಾದ ದೇವ ರಸ. ಭೂಮ=ಸರ್ವವ್ಯಾಪಿ ಪರಮಾತ್ಮ ಭವ್ಯ.

ವಿಶೇಷ : ನುಡಿ ೧ ಸಾಲು ೫ ರಿಂದ ೮ ಇವುಗಳ ಭಿನ್ನ ಪಾಠಾಂತರ ಹೀಗಿದೆ.

ಜೀವನಾಹವದಿ ಗೆದ್ದನಾರೊ
ತಾ ಬಿದ್ದನಾರೊ ಕಾಣೆ
ಜಿದ್ದು ಯುದ್ಧ ಇವನೇ ಪ್ರಬುದ್ಧ
ಈ ಮಾತು ಜೀವದಾಣೆ.

- ಕಾವ್ಯೋದ್ಯೋಗ-ಪುಟ-೨೭-೨೮.

## ೨ ಕವಿಯ ಬಟ್ಟೆ



೧

ಕವಿಯ ಬಟ್ಟೆ-ಕಾವೀ ಬಟ್ಟೆ
ಅದನ್ನು ಉಟ್ಟೆ ಎಂದಿಗೂ
ಬಿಚ್ಚಿಬಿಟ್ಟೆ ದಾನಕೊಟ್ಟೆ
ಮುಗಿಲನೆಲ್ಲ ಮಂದಿಗೂ

೨

ವಿರಹದಲ್ಲೆ ಮಿಲನವೆನಿಸಿ
ಸಂಧಿ ಸಂಧಿ ಸಂಧಿಗೂ
ಚರ್ಮ ಸುಲಿದ ಮರ್ಮಗಳಲಿ
ಯಜ್ಞ ಸಂದಿಗೊಂದಿಗೂ.

---

ಭಾವ : ಕವಿ ಸಂಸಾರಿ. ಸಂಸಾರ ಅವನಿಗೆ ಅತ್ಯಂತ ಪವಿತ್ರ. ವಿರಹದಲ್ಲೂ ಮಿಲನವನ್ನು ಅನುಭವಿಸುವ ಶಕ್ತಿ ಪಡೆಯಬೇಕು. ಸಂಸಾರವನ್ನು ಯಜ್ಞದಂತೆ ಸಾಂಗವಾಗಿ ಸಂಪೂರ್ಣಗೊಳಿಸಬೇಕು. ಬೇಂದ್ರೆಯವರಿಗೆ ಕಾವ್ಯಸೃಷ್ಟಿ ಎಂಬುದು ಪರಮಾತ್ಮನನ್ನು ಸಂತುಷ್ಟಗೊಳಿಸುವ ವಾಕ್‌ಯಜ್ಞವಾಗಿತ್ತು.

ವಿಶೇಷ : ಒಂದು ಸನ್ಮಾನ ಪ್ರಸಂಗದಲ್ಲಿ ಅವರಿಗೆ ಕಾವಿ ಬಟ್ಟೆ ಕೊಡಲಾದವು. ಅವುಗಳನ್ನು ಅವರು ಆ ಒಂದು ದಿನ ಉಟ್ಟು ಬಿಚ್ಚಿಬಿಟ್ಟರು. ಅನಂತರದಲ್ಲಿ ಎಂದೂ ಸ್ಪರ್ಶಿಸಲಿಲ್ಲ. ಕವನವನ್ನು ರಚಿಸಿ ರಕ್ಷಿಸಿದರು.

## ೩ ಇತ್ತೀಚೆ ಬೇಂದ್ರೆ ಮಾಸ್ತರ ಏನ್ ಮಾಡ್ತಾರ?

"ಗುಬ್ಬಿಗುಬ್ಬಿ ನಿನ್ನ ಗಂಡ್ತಾ ಏನ್ ಮಾಡ್ತಾನ್ ?
ಹಾಸಿಗೆಲ್ಲಾ ಹೇಸಿ ಮಾಡಿ, ಮೂಸಿ ನೋಡ್ತಾನ್" ॥ ಪಲ್ಲವಿ ॥

೧
ಎಮ್ಮೀ ಬೆನ್ನ ಹತ್ತಿ ಹಾಡ್ತಾರಽ
ಹಾವಿಗೆ ಮಾಟಾ ಮಾಡ್ತಾರಽ
ಮಂಗ್ಯಾನ ಆಟಾ ಆಡ್ತಾರಽ ॥ ಇತ್ತೀಚೆ...............

೨
'ಮತ್ತೇನೇನ್ ಮಾಡ್ತಾರ್ ?'
ಕಾಣದ ಹುಡಿಗೇರ್ನ ನೋಡ್ತಾರಽ
ಜೋಶಿಗೇರ್ಗೆ ಪದಾ ಹೇಳ್ತಾರಽ
ಕೀರ್ತೀ ಮುಂದ ಬಿಕ್ಕಿ ಬೇಡ್ತಾರಽ ॥ ಇತ್ತೀಚೆ..........

೩
ಮತ್ತ ಹ್ಯಾಂಗೇನ್ ಅಂತಾರಽ?
ಹ್ಯಾಂಗ ಹ್ಯಾಂಗೋ ಕುಂತಾರಽ
ಹೋ ಹ್ಯಾಂಗ ಹೋ ಅಂತಾರ!
ಗ್ಯಾಂಗಿಗೆ ಗ್ಯಾಂಗ, ಬೆಂತರಽ ಮಂತರಽ ॥ ಇತ್ತೀಚೆ..........

೪
ಅಲ್ಲಲ್ಲಾ! ಅಬ್ಬಬ್ಬಾ! ಜಾದು
ನಡಸ್ಯಾರಂತಲ್ಲಾ ಈ ಸಾಧು
ಕೊಳ್ಳಾಗ ರುದ್ರಾಕ್ಷಿ ಕೋದು
ಕಟ್ಟಿಗಿ, ಇಟ್ಟಿಗಿ, ಪೆಟ್ಟಿಗಿ
ರೊಕ್ಕಾಚಾರ ಬಿಟ್ಟು ಲೆಕ್ಕಾಚಾರ
ಎಲ್ಲಾ ಅಡಸಲಾಬಡಸಲಾ ॥ ಇತ್ತೀಚೆ..........

೫
ಯಾವ್ತಾಯಿ ಪಡದ್ಲೋ ಈ ಮಾಯಿ?
ತಲೆಕಾಯಿ, ಪಲ್ಲೆಕಾಯಿ, ಎಲ್ಲೇ ಕಾಯಿ,
ತಿಳೀತು ತಿಳೀತು ಮುಚ್ಚರಿ ಬಾಯಿ. ॥ ಇತ್ತೀಚೆ..........

೬

ಕಾಗ್ಯಾತು, ಗುಬ್ಬ್ಯಾತು
ನಾಯಾತು ಕರಡ್ಯಾತು
ಓತಿಕಾಟಕ್ಕ ಬೇಲಿಸಾಕ್ಷಿ
ಇದರಲ್ಲಿರಲಿ ಪಾದರಕ್ಷಿ
ಮೋಕ್ಷಾ ಅಂತ ರಿಕ್ಷಾ ಅಲ್ಲಾ
ಸ್ಕೂಟರಿಗೆ ಸೂಟರ್ ಯಾರು ? ॥ ಇತ್ತೀಚೆ..........

- ರಚನೆ : ೫-೧೨-೭೩

---

ಭಾವ : ಬೇಂದ್ರೆ ವಿಮರ್ಶಕರ ವಿಮರ್ಶೆ ಮಾಡಿದ ಬಗೆ. ನುಡಿ ೧, ೨, ೪ - ಕರ್ನಾಟಕ ಸರಕಾರ ನಿರ್ಮಿಸಿದ ಸಾಕ್ಷಿ ಚಿತ್ರ ಕುರಿತು ವಿಮರ್ಶೆ.

ಶಬ್ದಾರ್ಥ : ಸೂಟರ್=suitor.



# ೪ ಮೋದ ಕೊಡದಿಹ ಮುದ್ದು!

೧
ಮೋದ ಕೊಡದಿಹ ಮುದ್ದು!
ಹೆಣಕೆರಗಿದೊಲು ಹದ್ದು.
೨
ಘಾದರ ಹಾದರಾ ಮಾಡುವಂತಿಲ್ಲ
ನನ್ನೆ ನರಸವ್ವಗ ಗರ್ಭಪಾತ ಯುಕ್ತಿ
ಬಂಜೇರಿಗೇ ಜನ್ಮ ಮುಕ್ತಿ
೩
ಅಲ್ಲೆ ಗಣಿಕಾಗಣಂಗಳ ಮ್ಯಾಳಾ
ದನಾ ಕಾಯೋವನ ಗೋಪಾಳಾ
ಭಾಗವತರs ಹಿಂದ ಹಾಕತಾರ ತಾಳಾ.
೪
ಅಲ್ಲಿ ಗಣಪತಿಗೆ ಪತ್ನಿನೇ ಇಲ್ಲಾ
ಶುದ್ಧ ನಿರಂಬಳ ಎಲ್ಲಾ
ಸುಖ ಪಟ್ಟವs ಪಟ್ಟಾ
ಇಲ್ಲದವ ಬಿಟ್ಟಾ
ತೆಂಗು, ಬಾಳೆ, ಅಡಿಕೆ, ಬಂದರಾ
ಹುರಮಂಜೀ ನಾಡಿಗೋಡತಾಳ ಸುಂದರಾ.
೫
ಉಬ್ಬುಬ್ಬಿ ಆಗತಾಳ ಬಬ್ಬಿ
ಜಂಜಿರಾದ ಹಬ್ಸೀನ ತಬ್ಬಿ
ಸಿದ್ದಿಕಾ ಬಚ್ಚಾ
ಹುಟ್ಟಾನ ತಾನs ಲಫಂಗಾ ಲುಚ್ಚಾ!
೬
ನಾಡವರು! ಅಲ್ಲ ಕಾಡವರು
ಅಲ್ಲ ಬೇಡವರು ಬರೇ ನೋಡವರು
ನದಿ ಹಾಂಗ ಆಗೋದಿಲ್ಲ ಹಳ್ಳಾ
ಕಡಲಿಗೆ ಚೋರ ಯಾವಾಗೂ ಗಂಡಾ
ಯವನಾ, ಅರಬಾ, ಫಿರಂಗಿ, ಸಡೇಸೋಟಾ
'ರಿಕಾಮ ಟೇಕಡಾ!'

೭
ಆ ದಂಡೀಗುಂಟ ಪಾತ್ರದವರ ವಸ್ತಿ
ತಳವಾರರ ಗಸ್ತಿ, ಅಲ್ಲಿ
ಹುಡುಗರೂ ಕಳ್ಳರೂ ಜಾಸ್ತಿ
ಬಟ್ಲರ ಹಾದರಗಿತ್ತೇರ ಮಿಂಡ
ಮೀನ ಮಾಂಸ ಮದ್ಯ ಬಟ್ಟರs
ಮೈಥುನ, ಹಗಲಜಾವ
ಕೇಳಾವಾ ಯಾಂವಾ?
೮
ಯಕ್ಷಗಾನ ಮ್ಯಾಳದವರ ಕಣ್ಣು
ಗಂಡಸರs ಮೂಲ
ಅವs ಸೀರೀ ಉಟ್ಟರs ಸಾಕು
ಕಾಣ್ತಾನ ಹೆಣ್ಣು
ಉಣ್ತಾನ ಚಳ್ಳಹಣ್ಣು.

---

ಭಾವ : ಬಂದರದ ಜೀವನ ಹಾಗೂ ಯಕ್ಷಗಾನದಲ್ಲಿ ಹೆಣ್ಣು ಪಾತ್ರ ಹಾಕುವ ಗಂಡಸರನ್ನು ಕುರಿತು.

ಶಬ್ದಾರ್ಥ : ಚಳ್ಳಹಣ್ಣು=ಪ್ರಾಯೋಗಿಕ ಹಾಸ್ಯ ಪ್ರಸಂಗ, ಮೋಸದ ಮೋಜು



# ೫ ಅಮೃತನಾಗಿದ್ದ

೧

ಪಾಂಡುರಂಗನು ತಾನು ಶ್ರೀರಂಗವನ್ನಾಳ್ದು
ಕಪ್ಪಾದ, ಕಲ್ಲಾದ, ಇಟ್ಟಿಗೆಯಾದ, ನಾದವಾದ
ಮಾಯದಲಿ ಲಟಲಟನೆ ಹೊಡೆದ ಲಟಿಗೆಯ ಸವಿಗೆ
ಭಕ್ತ ಬೆರಗಾದ, ಅರಗಾದ ಕರಗಿ ನೀರಾದ, ಅಗಾಧ!

೨

ತೇಲಿದನೊ, ಮುಳುಗಿದನೊ, ತಮದ ಬಸಿರ್ಬೆಳಗಿದನೊ
ತೊಳಗಿದನೊ, ತನಗೆ ತಾನೇ ತನ್ನ ತನ್ನನೆ
ಒಳಗನಗಳಿದನೊ, ಪೊಗಳಿದನೊ, ಉಗಳಿದನೊ
ಕಳೆಕಳೆದು ಕಳೆಯ, ಕಳೆಯ ಉಳಿದನೊ ಚಿನ್ನ!

೩

ಅಳಿಯನೀಗೆಳೆಯ ಹೊರಗೆಳೆಯ ಒಳಗೆಳೆಯ
ಇದ್ದಲ್ಲಿ ಇದ್ದು ಅದ್ದು ಬದ್ದಿರಲಿಲ್ಲ; ಬಿತ್ತಾಗಿದ್ದ.
ಮರವಾಗದೇ ತನ್ನ ಅರಿವಾಗದೇ ಮತ್ತೆ
ಮೃಡನಂತೆ ಅಮೃತನಾಗಿದ್ದ!

- ರಚನೆ : ೧೧-೧೧-೧೯೬೫

---

ಭಾವ : ಪಾಂಡುರಂಗ ವಿಟ್ಠಲನ ಅಮೃತ ಶಕ್ತಿಯನ್ನು ಕುರಿತು.

ಶಬ್ದಾರ್ಥ : ಮೃಡ=ಮರಣ ಇಲ್ಲದವ, ಅಮೃತ ಶರೀರಧಾರಿ, ಶಿವ. ಲಟಿಗೆ-ಲಟಿಕೆ=ಬೆರಳುಗಳನ್ನು ಮಡಿಚಿ ಲಟಕ್ ಎಂಬ ಶಬ್ದ ಮಾಡುವುದು. ಅಗಳಿದನೊ=ತೋಡಿದನೊ. ಅಗಾಧ=ಅತ್ಯಧಿಕವಾದ, ಆಶ್ಚರ್ಯಕರವಾದ.

# ೬ ನನಗಿಲ್ಲಾ ಕಗ್ಗಂಟು

೧

ಇಲ್ಲ ಎಂಬುವುದು ಇಲ್ಲ ನನಗೆ
ಇದೆ ಎಂಬುದೊಂದೆ ಉಂಟು

೨

ಇರುವೆ ನಾನು ನೀನರಿವು ತಾನೆ ?
ನೀನೆಂಟು ದಿಕ್ಕಿಗೆಂಟು

೩

ಬ್ರಹ್ಮಾ ವಿಷ್ಣು ಶಿವಾ
ದೇವಾ ಎಲ್ಲರಿಗೂ ನಂಟು

೪

ಬರುವ ಹೋಗುವ ದಾರಿ
ನನಗಿಲ್ಲಾ ಕಗ್ಗಂಟು.

---

ಭಾವ : ಬೇಂದ್ರೆಯವರಿಗೆ ಸಂಖ್ಯಾಜ್ಞಾನ ಸಂಚಾರ ಸಹಜವಾಗಿತ್ತು. ಬ್ರಹ್ಮ, ವಿಷ್ಣು ಶಿವ ಜ್ಞಾನಕ್ಕೆ ಸಂಖ್ಯಾಜ್ಞಾನ ಕಗ್ಗಂಟು=ಅಡ್ಡಿಯಾಗಿರಲಿಲ್ಲ. ಎಂಟೂ ದಿಕ್ಕಿನ ಜ್ಞಾನವೇ ಆತ್ಮಪ್ರಜ್ಞೆ.



# ೭ ಪುಲಕ

೧
ಮಣ್ಣಿನಲಿ ಬಿರುಕು ಬಿಟ್ಟರೆ ಅಲ್ಲಿ
ವಾರಿಜದ ಜಲಪಾತದೊಡನೆ
ಹಾರಿದ ಬೀಜ ತೂರಿ ತುರುಕಲು
ಬಂದು ಸಾರಿ ಸೇರಿದೆ ಬಸಿರ ನೇರ
ನಸೆನಸೆ ಮೈಯ್ಯ, ಅಯ್ಯಾ!
೨
ಪುಲಕದಂತಂಕುರಿಸ-
ದಿರದೆ ಅದರಾ ಆಸೆ, ಓಹೋ
ದ್ವಿದಳದ ಮೀಸೆ ಬಾಚಿ ಬಂದಿರೆ
ಈಚಿ, ಕೂಚು ಕುಚೋ ನೀಚು!
೩
ಎಲೆ ಎಲೆಯ ತಲೆ ಸವರಿ, ಕಡ್ಡಿ
ಆಯಿತು ಬಡ್ಡಿ, ಟೊಂಗೆ, ಟೊಂಗೆಗೆ
ಅಂಗಿ, ಕುಂಚಿ, ಕುಲಾಯಿ, ಎಲೆಲೆ
ಹಸಿರಿನ ಮಾಯೆ, ತಾಯೆ
ಏನೇ ಆಟ, ಹೃದ್ರಂಗದೋಟ,!
೪
ಕಾಯಿ ಎನ್ನುವವರಾರು? ಮಿಡಿಮಿಡುಕು
ಹಿಡಿಹಿಡುಕು ದುಡುಕೋ ದುಡುಕು.
ಹುಡುಕು ಇದ್ದಲ್ಲೆಲ್ಲ ಒಡಲು ಒಡಲಿನ
ಗುಡಿಯು, ಉಡಿಗೆS ತೊಡಿಗೆ
ಮುಡಿಗೆS ತೊಡವೋ ತೊಡವು

೫

ಎಂತೊಳವೊ! ಕಳವೋ ಬಾಳು!
ನೇಸರಿನ ಉಂಬಳಿಯೆ ಕೂಲಿ, ಸಂಬಳ-
ವೆನಿಸಿ, ಬೆಂಬಳಿಸಿ ಬಂತು
ಮೂಡಲ ಭಾಷೆ, ಹೊಳೆ ಹೊಳೆಯ
ಕೂಡಲಕು, ಕಾಸೆ ಕೆಚ್ಚಲು, ತೊರೆಯ
ಎದೆಗೆ ಜಗ ಜೊಂಪಿರಿಯೆ.

- ರಚನೆ : ೧೯-೯-೧೯೬೭

---

ಭಾವ : ಭೂಮಿ ಹಚ್ಚುಹಸುರಾದದ್ದರ ವರ್ಣನೆ.

ಶಬ್ದಾರ್ಥ : ಪುಲಕ=ರೋಮಾಂಚನ. ನಸೆನಸೆ=ಕಿರಿ ಕಿರಿ, ಗೊಣಗಾಟ. ಉಂಬಳಿ=ಮಾನ್ಯವಾಗಿ ಕೊಡುವ ಭೂಮಿ, ಗ್ರಾಮ. ಕಾಸೆ=ಕಾವಿ ಬಣ್ಣ.



# ೮ ಒಂದೇ ಒಂದು ನಾಡಿ

೧
ನಾದ ತಪ್ಪಿದರೆ ಹಾದಿ ತಪ್ಪಿತು
ನಾದ ಗತಿಯೆ ನಾಡಿ,
ಮತ್ತೆ ಪಲ್ಲವಿಗೆ ಬರಲೇಬೇಕಣ್ಣ
ನುಡಿಯ ನುಡಿಯ ಹಾಡಿ.
೨
ಒಂದೇ ಒಂದು ನಾಡಿ
ಬರಿದು ಓರಂದ ಇರದು ಮಕರಂದ
ರಸವು ಹುಡಿಯ ಜೋಡಿ

---

ಭಾವ : ಮಕರಂದ ಸರ್ವವ್ಯಾಪಿ, ಇದರಂತೆಯೇ ನಾದ ಅಖಂಡ, ಕಂಪಿನ ಅಲೆ ಮತ್ತು ನಾದದ ಅಲೆ ಸ್ಮರಣೆಯಲ್ಲಿ ಸಂಗೀತದ ಸಮ ಸಾಧಿಸುವಂತೆ ಮತ್ತೆ ಮತ್ತೆ ನೆನಪು ಕೊಡುತ್ತವೆ.

ಶಬ್ದಾರ್ಥ : ಓರಂದ=ಒಂದೇ ಮಗ್ಗಲು. ಹುಡಿ=ಹೂವಿನ ಪರಾಗ.



# ೯ ಕೈಲಾಸದ ತೇರು

೧

ಹೊರಮೈ ಹೊಲಗೇರಿಯು ಆದರೆ
ಒಳಮೈ ಹೆಣದೂರು.
ಹೆಣವಾಗದೆ ಹೆಣ್ಣಾದರೆ ಗಣ್ಣಿಗೆ
ಅದು ಕೈಲಾಸದ ತೇರು.

೨

ಓ ಶಿಶುವೆ, ಶಶಿಯೇ, ಪ್ರಳಯವೆ
ತೊಟ್ಟಿಲು ಆಲಯವು ;
ಅಭಯದ ಪಿಂಡಕೆ ಭಯವೆ
ಅದು ಉಭಯದ ಸ್ವಯವು

೩

ಪಂಚಶರನ ಇಡಿನುಂಗಿದ ಹಿಮ ಮಹಿ-
ಮೆಯು ಅ ಊ ಮಾ ಯಾ ಕೂಸು ?
ಬೇಸಿಗೆಗೋ ಹೇಸಿಗೆ, ಹುರಿದರಾ ಕಮ್ಮಗೆ ಹರಡುವುದು
ಒಳಗಾದರು, ಹೊರಗಾದರು ಎಲ್ಲಾದರು ಲೇಸು

೪

ಮುಳುಗುವ ಜಲ, ಮೊಳಗುವ ತೆರೆ, ಯಾ ಕಾಲದ ಕಾಲ ?
ಏಳು ಮಲೆಯ ಯಾ ತಲೆಯೋ ಈ ರಾಗದ ಮೂಲ.

---

ಭಾವ : ಬಾಳಿನಲ್ಲಿ ಅಂತರಂಗ ಬಹಿರಂಗ ಎರಡೂ ಶುದ್ಧವಾಗುವದು ಅವಶ್ಯ. ಇದು ಆದಾಗ ಜೀವನ, ಕೈಲಾಸದ ತೇರು ಆಗುತ್ತದೆ.

ಶಬ್ದಾರ್ಥ : ಸ್ವಯ=ತನ್ನ.

## ೧೦ ಹಾದಿ ಯಾವುದು ?

ಕತ್ತಲೆಯಲ್ಲಿ ಹೇಳಬಹುದು, ಕೇಳಬಹುದು
ಬತ್ತಲೆಯಾಗಿ ಬದುಕಬಹುದು, ಬಾಳಬಹುದು
ನಾನು ಇತ್ತಲೆಯಾದರೆ
ನೀನು ಅತ್ತಲೆಯಾದರೆ
ಹಾದಿ ಯಾವುದು ?
ರಾಮ, ಕೃಷ್ಣ, ಹರಿ, ವಿಟ್ಠಲ ಅಲ್ಲದೇ ?
ಈ ಬ್ರಹ್ಮಚೈತನ್ಯ.

---

ಭಾವ : ಬ್ರಹ್ಮಚೈತನ್ಯರ ಮಾರ್ಗದರ್ಶಕ ಶಕ್ತಿ ಕುರಿತು. ಬೇಂದ್ರೆಯವರ ಜನ್ಮಕ್ಕೆ ಬ್ರಹ್ಮಚೈತನ್ಯರು ತಾಯಿ-ಪಾರ್ವತಿ-ಅಂಬಿಕೆಗೆ ಕೊಟ್ಟ ಮಂತ್ರೋಪದೇಶ ಕಾರಣ. ಬ್ರಹ್ಮಚೈತನ್ಯರು ಬಾಲಕ ದತ್ತಾತ್ರೇಯನನ್ನು ನರಗುಂದದಲ್ಲಿ ಎತ್ತಿಕೊಂಡು ಮುದ್ದಾಡಿದ್ದರು ಎಂಬುದಾಗಿ ಆ ಘಟನೆ ನೋಡಿದ ಹಿರಿಯರು ಹೇಳುತ್ತಿದ್ದರು.

ಶಬ್ದಾರ್ಥ : ಇತ್ತಲೆ=ಈ ಕಡೆ. ಅತ್ತಲೆ=ಆ ಕಡೆ.

ವಿಶೇಷ : ಗುರು ಶಿಷ್ಯರಲ್ಲಿ ಸಂವಾದ ಆಗಬೇಕು. ಇಬ್ಬರೂ ಎರಡು ಕಡೆಗೆ ಜಗ್ಗಿದರೆ ಹಾದಿ ದೊರಕದು. ಕಲಿಯುಗದ ಸಂಕಟ ಪರಿಹಾರಕ ಮಂತ್ರ-ರಾಮ, ಕೃಷ್ಣ, ಹರಿ, ವಿಟ್ಠಲ ಎಂದೇ ಘೋಷಿಸಲಾಗಿದೆ.



# ೧೧ ಕಾಮುಕಿಲ್ಲವು ಸಾವು

೧
ನಗಜಾತೆಯ ಖಗಜಾತಿಯ
ಮೃಗವ್ಯಾಧನ ವ್ಯಾಧಿ
ಶರನೋ ಹರನೋ ಸ್ಮರನೋ
ಆ ಚಿತ್ರವನಾದಿ.
೨
[ಕೆಂ ಕೆಂ ಕೆಂ ಕೆಂಪಗೆ]
ಕಂ ಕಂ ಕಂ ಸುಖಿಗೆ
ಹುಸಿ ಬಿರುಸಿನ, ನಸು ತುರಿಸಿನ
ಕಿಸುಗಣ್ಣಿದ ಶಿಖಿಗೆ.
೩
ಭೂ ಭವಗಳ ಭಾವಿಕತನ
ಬೂದಿಯ ಸಂಭೂತಿ.
ಕಾಮುಕಿಲ್ಲವು ಸಾವು
ಕಾಮಿಗೆ ಇದೆ ನೋವು.
೪
ಆ ಕಾವೂ, ಆ ಬಾವೂ, ಆ ತಾವಿನ ತೋವು
ಹದ ಹದುಳದ ಹುದು ಯಾವುದು? ಏರಿಳಿತದ ಬಾವು
ಮರತೇವೋ ಮರವಾದರು, ಬಿತ್ತಿನಲರ ತೇವು
[ಅನಂಗನಾಗಿಯೂ ಕಾಡೇಕಾಡುವನು,
ಗುರುತಿಲ್ಲದ ನೋವು]

---

ಭಾವ : ಕಾಮವು ಅನಂಗವಾಗಿ, ದೇಹದ ತುರಿಕೆಯಾಗಿ, ಬಾವಾಗಿ ಮತ್ತು ಅನೇಕ ವಿಧವಾಗಿ ದೇವ, ದಾನವ, ಮಾನವರನ್ನು ಕಾಡುತ್ತಲೆ ಬಂದಿದೆ. ಕೆಲವುಸಲ ಸದೇಹ ಕಾಮ, ಅದಿಲ್ಲದಾಗ ವಿದೇಹ ಕಾಮ. ಕಾಮಕ್ಕೆ ಸಾವಿಲ್ಲ ಎಂಬುದು ಸತ್ಯ.

ಶಬ್ದಾರ್ಥ : ತುರಿ=ತುರಿಕೆ ಎಂಬ ಚರ್ಮ ವ್ಯಾಧಿ. ತೋವು-ತೋಹು=ಅಡಗಿಕೊಳ್ಳುವ ಸ್ಥಳ. ತೇವು=ಹಸಿ.

ವಿಶೇಷ : ನುಡಿ-೧ : ಮೃಗಶಿರ ಒಂದು ನಕ್ಷತ್ರ. ಬ್ರಹ್ಮನು ವಾಗ್ದೇವಿಯನ್ನು ನಿರ್ಮಾಣಮಾಡಿ ಆಕೆಯ ಸೌಂದರ್ಯಕ್ಕೆ ಮೋಹಿಸಲು, ಆಕೆಯು ಹೆಣ್ಣು ಜಿಂಕೆಯ ರೂಪದಿಂದ ಓಡಿದಳು. ಆಗ ಬ್ರಹ್ಮನು ಗಂಡು ಜಿಂಕೆಯಾಗಿ ಆಕೆಯನ್ನು ಹಿಂಬಾಲಿಸಿದನು. ಶಿವನು ವ್ಯಾಧ ರೂಪದಿಂದ ಆ ಗಂಡು ಜಿಂಕೆಯ ತಲೆಯನ್ನು ಕತ್ತರಿಸಿದನು. ಆ ಜಿಂಕೆಯ ದೇಹದಿಂದ ಹೊರಹೊಮ್ಮಿದ ತೇಜಸ್ಸು ಆಕಾಶದಲ್ಲಿ ಮೃಗಶಿರಾ ನಕ್ಷತ್ರವಾಯಿತು. ಶಿವನು ಈ ನಕ್ಷತ್ರದ ಬಳಿಯಲ್ಲೇ ಮೃಗವ್ಯಾಧ ನಕ್ಷತ್ರವಾಗಿ ಆಕಾಶದಲ್ಲಿ ಮಿನುಗತೊಡಗಿದನು.

## ೧೨ ಜ್ಞಾನೇಶ್ವರಿಯ ಪ್ರಾರಂಭ

೧
ಓಂ ನಮೋ ಜಯ ಶ್ರೀ ಆದ್ಯೆ
ವೇದಪ್ರತಿಪಾದ್ಯೆ
ಸ್ವಯಂ ಸಂವೇದ್ಯೆ-ಆತ್ಮರೂಪೇ !

೨
ಶಿವಶಕ್ತಿಯ ಸತತೋದಯಾ
ಆದೇ ನಿಂ ದಯಾ
ದೀಪ್ತಹೃದಯಾ !

೩
ನರ ನರಾಯಣ ಸಂಭವೇ
ಓ ಸರ್ವಮಂಗಲೇ ಶಿವೇ
ಈ ಜೀವದಾವನಾಹವೇ !

೪
ನೀ ಕಾದರೆ ನಾ ಕಾದುವೆ
ಉಣಿಸಿದ್ದು ಎಲ್ಲ ಸ್ವಾದುವೆ
ನೀನೂದು, ನಾನು ಓದುವೆ.

೫
ಇದು ದಿವ್ಯ ಶೋಧ
ಇದು ಜೀವ ಬೋಧ
ಇದು ಜೀವನದಾಮೋದವೇ !

೬
ಬೆಳಗಿತ್ತು ಸ್ವಧರ್ಮದ, ಸೂರ್ಯ
ಅದಕೇಳು ಊದುತಿದೆ ತೂರ್ಯ
ಇಗೊ ಸುತ್ತಿದೆ ದೇವ ಕಾರ್ಯ

೭

ಏಳೇಳು ಜೀವ ಜೀವ
ಓ ಪರಾತ್ಪರೇ ಪಾವನೇ
ಇದೆ ಜೀವನ ಸಂಭಾವನೆ!

- ರಚನೆ : ೧೯೫೫
-'ಜ್ಞಾನೇಶ್ವರರ ಪಸಾಯದಾನ' ಎಂಬ ಶೀರ್ಷಿಕೆ ತಪ್ಪಾಗಿ ಬದ್ದಿತ್ತು

---

ಭಾವ : ಮಹಾರಾಷ್ಟ್ರದ ಸಂತಕವಿ-ಜ್ಞಾನದೇವ. ಇವನ ಕಾಲ-೧೩ನೇ ಶತಮಾನ. ಜ್ಞಾನೇಶ್ವರಿ-ಅತ್ಯಂತ ಶ್ರೇಷ್ಠ ಪ್ರಾಸಾದಿಕ ಗ್ರಂಥ. ಇದು ಭಗವದ್ಗೀತೆಗೆ ಬರೆದ ಭಾಷ್ಯ. ಇದರ ಪ್ರಾರಂಭದ ಸ್ತವನದ ಭಾವಾನುವಾದ.

ಶಬ್ದಾರ್ಥ : ಜೀವದಾ+ವನ+ಆಹವೆ=ಜೀವನವೆಂಬವನಕ್ಕೆ ಕರೆಯುವಿಕೆ. ಕಾದರೆ=ಯುದ್ಧ ಮಾಡಿದ್ದಾದರೆ. ಕಾದುವೆ=ಯುದ್ಧ ಮಾಡುವೆ. ತೂರ್ಯ=ಒಂದು ವಿಧದ ವಾದ್ಯ. ಸಂಭಾವನೆ=ಪೂಜೆ, ಮರ್ಯಾದೆ, ಉಡುಗೊರೆ.



# ೧೩. ಶಾಂತಿಯ ಆಶ್ರಮವು

ಬಂತು ನೋಡು ಶಾಂತಿ ಕಲೆS, ಸದ್ದಿಲ್ಲದಲೇSS
ತಮವನು ಕಂಗೆಡಿಸದೆ, ಸತ್ ಸತ್ತ್ವವ ಕೆಡಿಸದಲೇ. ॥ ಪಲ್ಲವಿ ॥

೧
ಮೂಡದ ದುಃಖ
ಸಾವಿಲ್ಲದ ಬಾಳುವೆ
ಬಾಳ ಬಾಳಿದು ಸಾಯದ
ಸಾವಿನ ಲೆಕ್ಕ.

೨
ಛಂದದ ಯತಿ ಸಮಯಾ
ಮಾತಿನ ನಡುವಿನ ಮೌನಾ
ತ್ವೇಷದ ದ್ವೇಷದ ಹುಸಿಯಲಿ
ಇಣುಕುವ ಸುಮನ್ನಾನಾ.

೩
ಬದುಕಿನ ಮಗ್ಗುಲ ಮರಣ
ಬಿರುಗಾಳಿಯ ನಿದ್ದೆ
ಸೃಷ್ಟಿಯ ಬಸಿರಿದು ಪ್ರಳಯದ
ಬಯಲೋ ತನ್ಮಧ್ಯೆ.

೪
ಅದು ಅಗೋಚರ ಚೆಲುವು
ಏಕಾಕಿ ಪ್ರೇಮ
ಮಧ್ಯವು ಅಂತರ್ವಾಣಿಯು
ಸುಜ್ಞಾನ ಧಾಮ.

೫
ಹರ್ಷ ಬಾಷ್ಪ ಸಿಂಚಿತವೀ
ವಿಕಸಿತ ಸುಮವು
ಬಾಳಿದೋ ತವರು ಮನೆ
ಶಾಂತಿಯ ಆಶ್ರಮವು.



---

ಭಾವ : ಬದುಕು ಹಾಗೂ ಬಾಳಿನ ಸ್ವರೂಪದ ತಿಳುವಳಿಕೆ ಸತ್ತ್ವಕ್ಕೆ ಆಗುತ್ತದೆ. ಈ ಸತ್ತ್ವಗುಣ ಜಾಗೃತವಾದ ದೇಹವೇ ಆಶ್ರಮ. ಅಲ್ಲಿ ಶಾಂತಿ ಸ್ಥಾಯಿ.

# ೧೪ ಯಾರಾಕೆ ?

೧
ತಿಂಗಳು ತಿಂಗಳು
ತಲೆ ತಿಂದಾಕೆ ?
ಕತ್ತಲೆಯಲಿ
ಕೂ, ಹೂ, ಎಂದಾಕೆ.

೨
ಬೆಳ್ದಿಂಗಳ ಕಡಲಿಗೆ
ಭಗ್ಗನೆ ಬಂದಾಕೆ !
ಕನಸಿನ ತಿನಸನು
[ಗಕ್ಕನೆ] ತಂದಾಕೆ !
ಗುಂಗು ಹಿಡಿಸಿದಾಕೆ
ಹುಚ್ಚು ಬಿಡಿಸಿದಾಕೆ.

೩
ಕೆಂಗಲ್ಲಕೆ ಕರಿ
ಬೊಟ್ಟಿಟ್ಟಾಕೆ
ಬಟ್ಟೆಯ ಬಿಟ್ಟಾಕೆ ;
ಮೊಗದಾವರೆ
ತೇಲುತಲಿಟ್ಟಾಕೆ.

೪
ಓ ರೋಹಿಣಿ ! ಓ ಕೃತ್ತಿಕೆ, ಭರಣೀ
ಓ ಅಶ್ವಿನಿ, ಬನ್ನಿರಿ ಎಂದಾಕೆ
ನೋಡುವ ಕಣ್ಣಿಗೆ
ಗುರಿ ತೊಟ್ಟಾಕೆ.

೫
ಮಾಸದ ದೋಷದ
ಕುರುಹಿಟ್ಟಾಕೆ
ಯಾರಾಕೆ ?

೬
ರಾಕಾ ! ಕೂಹೂ !
ಗುಂಗೂ ! ಸಿನಿವಾಲೀ !
ಎಂಬಾಕೆ !
ತಂಬಲ ತಿಂಬಾಕೆ.

೭
ಚಂದ್ರನ ಜತಿ
ಪಾತ್ರವ ಕುಣಿದಾಕೆ
ಮರುಳಿನ ಮಣಿಯನು ಪೋಣಿಸಿದಾಕೆ
ಮೀನದ ಬಲೆಯನು ಹೆಣೆದಾಕೆ.

೮
ಕಣ್ಣಿಗೆ ನಿದ್ದೆಯ ತಂದಾಕೆ
ಬೆಳಗಿಗೆ ಏಳಿರಿ ಎಂದಾಕೆ.
ಓಹೋ ಮುಗಿಲಿಗೆ ಜಿಗಿದಾಕೆ !
ಸೂರ್ಯನ ಬೆಳಕಿಗು ಸಿಗದಾಕೆ ;
ನನ್ನೊಳಗೇ ನನ್ನೆಳೆದಾಕೆ !
ಯಾರಾಕೆ ?

---

ಭಾವ : ಬೆಳುದಿಂಗಳ ಕುರಿತು ಚಿಂತನ.

ಶಬ್ದಾರ್ಥ : ತಿನ್=ಚಂದ್ರ ಕಲೆ. ತಿಂಗಳ್=ಚಾಂದ್ರಮಾಸ. ರಾಕಾ=ಹುಣ್ಣಿವೆ. ಕೂಹೂ=ಶರೀರದಲ್ಲಿ ಪ್ರಮುಖ ನಾಡಿ ಇಪ್ಪತ್ತನಾಲ್ಕು. ಅದರಲ್ಲಿ ಹತ್ತೇ ನಾಡಿಗಳಲ್ಲಿ Cranial Nerves ವಾಯು ಸಂಚಾರವಿರುತ್ತದೆ. ಈ ಹತ್ತರಲ್ಲಿ ಇಡಾ, ಪಿಂಗಲಾ, ಮತ್ತು ಸುಷುಮ್ನಾ ಇವು ಅತ್ಯಂತ ಶ್ರೇಷ್ಠ. ಮುಂದಿನ ಹೆಸರು ಹೀಗಿವೆ : ೪-ಗಾಂಧಾರಿ; ೫-ಹಸ್ತಿಜಿಹ್ವಾ; ೬-ಪೂಷಾ; ೭-ಯಶಸ್ವಿನೀ; ೮-ಅಲಂಬುಷಾ; ೯ನೇ ನಾಡಿಯ ಹೆಸರು ಕೂಹೂ. ೧೦-ಶಂಖಿನಿ. ಗುಂಗೂ=ಪರವಶ ಮಾಡಿದವಳು-ಸಿನಿವಾಲೀ. ಸಿನಿವಾಲೀ=ಸ್ತ್ರೀ ಚಂದ್ರ ದೇವತೆ, ಚಂದ್ರನ ಕೆಂಪು ಬೆಳಕು.

ವಿಶೇಷ : ಸಾಹಿತ್ಯದ ವಿರಾಟ್ ಸ್ವರೂಪದಲ್ಲಿ - 'ತಿಂಗಳು' ಪ್ರಬಂಧ, ಪುಟ ೯೪೭ ರಿಂದ ೯೫೧ ವಿವರಕ್ಕಾಗಿ ನೋಡಬೇಕು.



## ೧೫ ಈಕೆ

ಲುಕು ಲುಕು ಬೆಳಕಿನ
ಕುಲು ಕುಲು ನಗೆಯಾಕೆ ! ॥ ಪಲ್ಲವಿ ॥

೧
ಕಿಲಿ ಕಿಲಿ ಹಕ್ಕಿಯ
ಕಲ ಕಲ ರವದಲಿ
ಧ್ವನಿಸುವ ಬಗೆಯಾಕೆ !

೨
ಮಾನಸ ಸರಸಿಯ
ನೆನಪಿನ ನೆರಳಾಕೆ
ಯಾರೀಕೆ ?

೩
ಹಿರಣ್ಯಗರ್ಭದ
ಕೆಂಪಿನ ಹರಳಾಕೆ
ಈ ಜೋಕೆ.

೪
ಬೆಳುದಿಂಗಳ ತಿರುಳಾಕೆ
ಪಡೆದಾಕೆ ಹಡೆದಾಕೆ
ಮುದ್ದಿಲಿ ಹಿಡಿದಾಕೆ

೫
ಜನ್ಮಾಂತರಗಳ
ದರಿದರಿಗಳ ದಾಟುತ
ನಡೆದಾಕೆ, ಯಾರೀಕೆ ?

೬
ಒಡಲಿನ ಒಡಗುಟ್ಟುವ
ಬಾಯ್ಮುಚ್ಚಿಸಿ ಜುಮ್ಮನೆ
ಎಳೆ ತಂತಿಯ ಮಿಡಿದಾಕೆ
ಕೈ ಬಿಡದಾಕೆ, ಯಾರೀಕೆ ?

೭
ಒಂದೂ, ಎರಡೂ,
ಮೂರು, ನಾಕೇ ?
ನಾನ್ಯಾಕೆ ? ನೀನ್ಯಾಕೆ ?
ಅವನ್ಯಾಕೆ ? ಈಕೆಯೆ ಈಶೆ।

- ರಚನೆ : ೧೯೬೨

---

ಭಾವ : ಈಶನ ಪತ್ನಿ-ಈಶೆ. "ಈಶಾವಾಸ್ಯಂ ಇದಂ ಸರ್ವಂ" ಎಂಬಂತೆ ಈಶೆಯ ಶಕ್ತಿ ಸರ್ವವ್ಯಾಪಿ. ಆದರ ಮಹಿಮೆಯ ಗೀತ.



# ೧೬ ಸೌಮ್ಯ ಮುಖವೆ ಚಂದಿರಾ

ಚಿಂತನ—:

೧

ಕಾಡಡವಿ, ಹೂದೋಟ, ಇಮ್ಮಾವು ತೋಪು
ಇದ್ರಧನು, ಸೋಪಾನ, ಸೋಮಪ್ರಾಣ.
ದಿತಿಗು ಅದಿತಿಗು ಸವತಿ-
ಮತ್ಸರವು ಪ್ರಖ್ಯಾತ.
ಯಾವ ಆಖ್ಯಾತದಲಿ ಅದಕೆ ಮುಕ್ತಿ?
ಭಕ್ತಿಯಲಿ ಅವಿಭಾಜ್ಯ ಭಜನವಿರೆ, ಸ್ವಜನನಿರೆ,
ಬುದ್ಧಿಗೂ ಭಾವಕ್ಕು ಶಮವೆ ಯುಕ್ತಿ.

೨

ಶ್ರುತಿಗು ದೃಷ್ಟಿಗು ನಡವೆ ಚತುರಂಗವು
ಅಲ್ಲಿಯೇ ಚೆಲ್ಲಾಟ ಶಬ್ದಛ್ಛಲಾ
ಕಣ್ಣಿಗೋ ಕಿವಿಯು ಇದೆ
ಗವಿಯಲ್ಲಿ ಇದೆಯೋ ಧ್ವನಿ.

೩

ವಾಲ್ಮೀಕಿ ಶಾಪವೋ-ರಾಮಾಯಣಾ ?
ಚಿತೆಯಲ್ಲಿ ಉರಿಯುತಿಹ ಆ ರಾವಣಾ
ಬೇರೆಯ ಅನುಗ್ರಹವೆ ಧ್ವನಿ ವ್ಯಂಜನಾ
ಸಾಧಾರಣೀಕರಣ ದಿನ ರಂಜನಾ
ನಿಶೆ ಬೇಕೆ ? ಉಷೆ ಒಕೆ ? ರಥಚಕ್ರಕೆ ?

೪

ಇಹಪರ ವ್ಯಾಪಾರ ಶಬ್ದ ಸಾರಾ
ಗಂಧ, ರುಚಿ, ರೂಪ, ಶುಚಿ, ಇಹುದಪಾರ
ಬಯಲ ಮೂಕತೆ ಕೂಡ ವ್ಯರ್ಥವಲ್ಲಾ
ಶೂನ್ಯಕ್ಕೂ ಭಾವವಿರೆ ಬ್ರಹ್ಮಬೆಲ್ಲಾ?
ಆ ಅಪಸ್ವರದಲ್ಲು ಏನೋ ವ್ಯಂಜಕತೆ ಇದೆ.

**ಎರಡು :**

೧

ಗಣಿಯ ಕಲ್ಲು, ಕಲ್ಲುರಾಶಿ
ಗುಡಿಗೋಪುರ ಎತ್ತರಾ
ಕಟೆದ ಮೂರ್ತಿ ಹೆಸರ ಕೀರ್ತಿ
ಉಳಿಮುಟ್ಟದ ಹೊಸತರಾ.

೨

ಯಮಕವಿಲ್ಲ ಗಮಕವಿಲ್ಲ
ಸ್ವಚ್ಛ ಅಡಕೆ ಕ್ರಮುಕ; ಬೆಟ್ಟವು ತೆರೆದ ಎದೆ.
ಅಡಕೊತ್ತಿನ ಗೆಣೆಯ ಬರುವ
ಚಂಚಿಯ ಸಾಮಾನು ತರುವ
ಪಿಚಿಪಿಚಿ ಉಗುಳಬಹುದು.
ಜಜ್ಜಿ ಪಿಚ್ಚಿ ಕರಿ ಎಲೆ.

೩

ಮೆಲುಕು ಹಾಕಬಹುದು, ಹಳೆಯ
ಗೆಳೆಯ, ಎಳೆಯ ಹುಡುಕುತ
ಕೆಂಪಾಯಿತು ಬೀದಿ
ಕತ್ತಲಾಯಿತು ಸುತ್ತಲೂ.

೪

ಮಿಣುಕು ಇಣುಕು
ಬೆಳಕೆಂದೂ ಬತ್ತಲು
ಕಿಟಕಿ ದೀಪ
ಒರತೆ, ಕೊರತೆ, ಚಿರತೆ,
ಬರಲು ಚೀರು.
ಬೇಟೆ ಎಲ್ಲೋ ಓಡಿತು
ಕನಸಿನಲ್ಲೊ ನಿದ್ದೆಯು.

೫

"ಅಹೋ ರೂಪ ಅಹೋ ಧ್ವನಿ!"
ಅಹೋ ಬಲ, ಅಹೋ ದಲ
ಅಹೋರಹೋ ನಿಶಾಚರಾ
ಅಹರಹರವಿದು ಇಂಚರಾ.

೬

ಶ್ರುತಿಗೆ ಬೇಕೆ ಜ್ಯೋತಿಷಾ
ಸ್ಫೋಟಕ್ಕೂ ಹೊಸ ಮಿಷಾ
ಕಿವುಡುಗಾವ ಕುರುಹಿದೆ
ಆವು ಕರುವಿದೆ.
ಹಿಂಡಿರಣ್ಣಾ ಛಂಡಿಗಳಿರಾ
'ಹಿಂಡಿ' ಮಾತು ಏತಕೆ ?

೭

ಇದೇ ವರ್ಣ, ಇದೇ ಸ್ವರಾ
ಇದೇ ವ್ಯಂಜನಾ ಅಭ್ಯಂಜನಾ
ನಿತ್ಯವೂ ನಿರಂಜನಾ
ಕತ್ತಲೆಯೇ ಅಂಜನಾ ?

೮

ಕಣ್ಣಿದ್ದರೆ ಏವೆ ತೆರೆ
ಚಿತ್ರ ಚಮತ್ಕಾರ ನೆರೆ
ಓಹೋ ದೊರೆ, ಎಂಥ ತೊರೆ !

೯

ಆನಂದವು ಸಿಂಧು ಕಾಣೋ
ರಸಬಿಂದುವು ಸುಂದರಾ
ಷೋಡಶಿಗಿದೆ ಖಗ್ರಾಸವು
ಸಪ್ತದಶಿಯೆ ಮಂದಿರಾ
ಶುಕ್ಲಪಕ್ಷ, ಕೃಷ್ಣಪಕ್ಷ
ಸೌಮ್ಯ ಮುಖವೆ ಚಂದಿರಾ.

---

ಭಾವ : ಹದಿನಾರು ಕಲೆಗಳುಳ್ಳ ಚಂದ್ರನ ಹಿಂದೆ ಅದೃಶ್ಯವಾದ ಹದಿನೇಳನೆಯ ಕಲೆ-ಜೀವನಕಲೆ ಇರುತ್ತದೆ ಎಂದು ಅನುಭಾವಿಗಳು ಸಾರಿದ್ದಾರೆ. ೧೭ ಕಲೆಗಳ ಚಂದ್ರನ ಸೌಮ್ಯಮುಖದ ವರ್ಣನೆ.

ಶಬ್ದಾರ್ಥ : ಕ್ರಮುಕ=ಅಡಕೆ. ಹಿಂಡಿಮಾತು=ಸಿಪ್ಪೆ ಚರಟದಂತ ಸತ್ತ್ವಹೀನ ಮಾತು.

# ೧೭ ಉದ್ಯೋಗ ಶೀಲಾ

೧
ವಶೀಲೆ ಅಲ್ಲಾ, ಬದುಕುವಶೀಲಾ
ಗುಣಕೌಶಲ್ಯ, ಬಾಳಿನ ಕೀಲಾ.
೨
ನೂರು ವರುಷ ಬದುಕಿದರ‍್ಯಾರು ?
ಉಕ್ಕಿನ ಕಾರಖಾನೆ ತೆರೆದವರ‍್ಯಾರು ?
ಜೋಗಿನ ಮಿಂಚು ಕಂಡವರ‍್ಯಾರು ?
ಕೆಲಗೇರಿಯ ಕೆರಿ ಕಟ್ಟಿದವರ‍್ಯಾರು ?
ವಿಶ್ವೇಶ್ವರಯ್ಯಾ-ವಿಶ್ವಬಂಧು !
ಬೆಳೆಸಿದನು ನಾಡು, ಉದ್ಯೋಗ ತಂದು.
೩
'ಆರಾಮ ಹರಾಮ'
ಉದ್ಯೋಗ ಶರಣ, ಅವರಿಗಿಲ್ಲ ಮರಣ.
ದುಡಿಯುವವರೇ ಒಡೆಯರು !
ದುಡಿಯುವ ಬಡವರು
ನಾಡಿನ ಒಡೆಯರು ;
ದುಡಿಯದ ಒಡೆಯರು
ಕಾಣದ ಹಾದಿಯ ಹಿಡಿವರು.
೪
ದುಡ್ಡಿನ ದೊಡ್ಡಪ್ಪಾ
ಉದ್ಯೋಗಕ್ಕ ಕೊಡಪ್ಪಾ
ಒಡೆತನ ಸಾಕು
ದುಡಿವರ ಒಡೆತನ ಬರಲಿ
ಉದ್ಯೋಗವೆ ಸಿರಿವಂತಿಕೆ.

---

ಭಾವ : ದುಡಿಯುವವರೆ ಆಳುವವರಾಗಲಿ ಎಂಬ ಪುರೋಗಾಮಿ ಚಿಂತನ ಈ ಕವನದ ಹಿನ್ನೆಲೆ.

ಶಬ್ದಾರ್ಥ : ಕೀಲು=ಅಗಣಿ, ಚಿಲಕ.

# ೧೮ ಪರಮಸುಖ

೧

ಬ್ರಹ್ಮಕ್ಕೆ ನಾಲ್ಕು ಮುಖಾ
ಒಂದೊಂದು ಪರಮಸುಖಾ
ಶೂನ್ಯದಿಂದನಂತಕೆ
ಹಂತದಿಂದ ಹಂತಕೆ
ಹತ್ತರಿಂದ ನೂರರಿಂದ
ಸಾಸಿರದಾ ದೂರಕೆ
ತನ್ನ ಮಹಾಪೂರಕೆ

- ರಚನೆ : ೧೮-೮-೧೯೫೪

---

ಭಾವ : ನಾಕು ಮುಖದ ಬ್ರಹ್ಮ ಚಿಂತನದಿಂದ ಹತ್ತರ, ಸಾವಿರದ ಜ್ಞಾನವಾದ ಸುಖ.





## ೧೯ ಲೆಕ್ಕಾ ಪಕ್ಕಾ

೧

ಬೆಣ್ಣಿಯೊಳಗ ಬಟ್ಟು ಅದ್ದಿ ಮೂಗಿಗೆ
ಹಚ್ಚಿಗೊಂಬಾವ್ರು ಬಹದ್ದೂರಜನಾ!
ಇದು ಮಾತಿನ ಪವಾಡಲ್ಲ, ಮುಖವಾಡ.

೨

ಮಾತಿನ ಮೌನದ ತಿಕ್ಕಾಟದಾಗ
ದೇವಾಸುರ ಯುದ್ಧ ಆಗ್ತಾವ.
ಆ ಸೂತೋವಾಚದಿಂದ-ಪುರಾಣ, ವೇದ, ಇತಿಹಾಸ,
ಆಗ್ತಾವ; ಹೋಗ್ತಾವ,
ವೇದ ದೇವ
ಲೆಕ್ಕಾ ಪಕ್ಕಾ.

---

ಭಾವ : ಪುರಾಣ, ವೇದ, ಇತಿಹಾಸ ಆಗ್ತಾವ. ಹೋಗ್ತಾವ. ವೇದ-೪೮, ದೇವ-೮೪ ಈ ಲೆಕ್ಕಾಪಕ್ಕಾ.



## ೨೦ ಅರಿವು-ಮರೆವು

೧

ಕಾಣುವುದು ಒಂದು, ನೋಡುವುದು ಒಂದು
ಇದು ಅರಿವು ಮರೆವಿನಾಟ.
ಕಾಣ್ಕೆ ನೋಟಗಳ ಕೂಟದಲ್ಲಿಯೇ
ಬಿನ್ನಾಣದೊಂದು ಬೇಟ.

೨

ಅಜ್ಞಾನಪಿಂಡವದು ಹುಟ್ಟು ಸಾವಿನಾ
ಬಾಯೊಳಿದ್ದ ತುತ್ತು.
ಜ್ಞಾನಪಿಂಡಕೋ ಸಚ್ಚಿದಾನಂದ-
ದೊಂದು ನೆಲೆಯು ಗೊತ್ತು.

---

ಭಾವ : ಕಾಣೋದು, ತೋರೋದು ಮತ್ತು ಜ್ಞಾನವಾಗುವುದು ಒಂದೇ ಕ್ರಿಯೆಯಲ್ಲ. ಮೂರೂ ಕ್ರಿಯೆ ಒಂದಾದಾಗ-ಸಚ್ಚಿದಾನಂದದ ಅನುಭವ ಬರುವುದು ನಿಶ್ಚಿತ ಎಂಬ ನಿಲುವು.

# ೨೧ ದತ್ತಜ್ಞನ ವಚನಗಳು

೧

ಅಲ್ಲಮನೊಡನಾಟ ಬೆಲ್ಲತಾನಾದಂತೆ
ಬಲ್ಲವನ ಬಾಳು ಹರಿವ, ತಾ ಶಿವದ
ಎಲ್ಲೆ ತಿಳಿದಂತೆ ದತ್ತಜ್ಞ

೨

ಕರುಳೆ ಇಲ್ಲದ ಕರುಣೆ?
ಬೆರಳು ಇಲ್ಲದ ಕರಣ!
ಹುರುಳು ವ್ಯಾಕರಣ ತಾನಲ್ಲ;
ಅರಳುಮರುಳೆಂಬ ದತ್ತಜ್ಞ

---

ಭಾವ : ಅಲ್ಲಮನನ್ನು ಕುರಿತು ಬೇಂದ್ರೆಯವರ ಎರಡು ವಚನಗಳು.

ಶಬ್ದಾರ್ಥ : ಎಲ್ಲೆ=ಮೇರೆ, ಗಡಿ, ಮಿತಿ. ಕರುಳೆ=ಪ್ರೀತಿ, ವಾತ್ಸಲ್ಯ. ಕರುಣೆ=ದಯೆ. ಕರಣ=ಇಂದ್ರಿಯ. ಹುರುಳು=ಸಾರ, ಯೋಗ್ಯತೆ. ಅರಳುಮರುಳು=ಮರಳಿ ಅರಳುವ ಕ್ರಿಯೆ.

ವಿಶೇಷ : ವಾಕ್ಯಾರ್ಥಕ್ಕೆ ವ್ಯಾಕರಣದ ನಿಯಮದಂತೆ ಅರ್ಥ ಹಚ್ಚಬಹುದು. ಆ ನಿಯಮ ಅಲ್ಲಮನ ವ್ಯಕ್ತಿತ್ವದ ಅರ್ಥವಾಗುವುದಕ್ಕೆ ಸಹಾಯಕವಾಗಲಾರದು. ಶಿವನ ಮೇರೆ, ಶಿವನ ಕರುಣೆ, ಶಿವನ ಹುರುಳು ಎಲ್ಲ ಬಲ್ಲವನು ಅಲ್ಲಮ. ಅವನಿಂದ ಪ್ರೇರಣೆ ದತ್ತವಾಗಿದೆ - ಕೊಡಲ್ಪಟ್ಟಿದೆ ಬೇಂದ್ರೆಯವರಿಗೆ ಎಂಬ ಸೂಚನೆ ಇಲ್ಲಿದೆ.



## ೨೨ ಬದುಕಾಗಿದೆ ಕಸವು

ಜಗಲಿಂಗವು ಶಿವಲಿಂಗದ
ಸಂಗದ ಸಮರಸವು,
ನಾ ನೀ ನೋಡದೆ ಕೂಡದೆ
ಬದುಕಾಗಿದೆ  ಕಸವು.

---

ಭಾವ : ಭಕ್ತ ಮತ್ತು ಭಗವಂತ ಇವರಲ್ಲಿ ಸಂಗ ಸಾಮರಸ್ಯ ನಿಷ್ಪನ್ನವಾಗದಿದ್ದರೆ ಬದುಕಿಗೆ ಅರ್ಥವಿಲ್ಲ.

# ೨೩ ಹೊಳೆಯ ಹರಿವು

ಹೊಳೆಯ ಹರಿವು ಆ ಕಡಲಕಡೆ
ನಡೇ ನಡೇ ಇದಿರಿಲ್ಲ ತಡೆ ॥ ಪಲ್ಲವಿ ॥

೧
ಭಸ್ಮಿತವಾಯಿತು ಹಳತ ಅಸ್ಮಿತೇ
ನವೋ ನವೋಸ್ಮಿಯು ದಶಮ ದಿಶೇ
ಅಪಾರ ಆನಂದದ ವಿಸ್ಮಿತತೆ
ಉದಿಸಲು ಕಳೆದಿತು ಉಳಿದ ನಿಶೇ

೨
ಭಗವಂತನ ಸ್ಮಿತ, ತದಸ್ಮಿಕಿರಣ
ಜಾಗ ಮಾಡಿ ನಂ ಭಾಗದಲೀ
ತಮಶಮಗೊಳಿಸಿ, ರಜ ಉಜ್ವಲಿಸಿ
ಸಾತ್ವಿಕತೆಯು ಇದೆ ಅನುರಾಗದಲೀ

೩
ಮೂಡಲು ಮೂಡಿದ ಅಸ್ತಮಿಸಿದ ರವಿ
ಹೊತ್ತಿಗೆ ಇರದೋ ಮರವೆ ಗವೀ
ಮನವೇ ಕವಚ, ಮನವೇ ಸುವಚ
ರುಚಿಯ ರಸವೇ ತಾನಿತ್ತ ಸವೀ

- ರಚನೆ : ೩೦-೬-೧೯೬೬

---

ಭಾವ : ನೀರಿನ ವಿಭೂತಿಮತ್ವದ ವರ್ಣನೆ. 'ಆಪೋಜ್ಯೋತಿರಸೋಮೃತಂ'ದ ಚಿಂತನದ ಕವನ.

ಶಬ್ದಾರ್ಥ : ಸು+ವಚ=ಸುವಚ=ಒಳ್ಳೆಯಮಾತು.



## ೨೪ ತುಂಬಿ ಬಾರೆ

೧

ಧಾರಾಕಾರ, ಸಾಕಾರವಾಗಿ ಇಳಿದಿರುವೆ ಇಳೆಗೆ ನೀನು
ರಾಕಾಸಾರ ಕಾಸಾರ ತಳವ ತೊಳೆದಿರುವೆ ಬಾನು, ಭಾನು!

೨

ವಾರಂವಾರ ಏಳೂವಾರ ಬೆಳಕಾಗಿ ನೀನಿರಾಕಿ
ಡಾಕಿನಿಯು ಅಲ್ಲಾ, ದಕ್ಷಿಣೆಯ ನೀ ಕೊಡಾಕಿ ಸಾಕಿ.

೩

ನಾಕೆನ್ನಲೇಕೆ ಸಾಕೆನ್ನಲೇಕೆ ಅಸರಂತಸುವರ ನೀರೆ
ರಾಕೇಂದು ಸಿಂಧು ಅಪರಂಪಾರ [ಹೊರ ಹೊಮ್ಮಿ ತುಂಬಿ ಬಾರೆ]

---

ಭಾವ : ನೀರಿನ-ಬೆಳಕಿನ ಧಾರಾಕಾರ ಹರಿಯುವಿಕೆಯನ್ನು ಕಂಡ ಆನಂದದ ಅಭಿವ್ಯಕ್ತಿ

ಶಬ್ದಾರ್ಥ : ರಾಕಾ=ತುಂಬು ಹುಣ್ಣಿವೆ. ಕಾಸಾರ=ಸರೋವರ. ಬಾನು=ಆಕಾಶ. ಭಾನು=ಸೂರ್ಯ.
ಡಾಕಿನಿ=ಹೆಣ್ಣು ರಾಕ್ಷಸಿ. ಸಾಕಿ=ಸಲುಹಿ.

## ೨೫ ವಂದೇ ಅವ್ಮಾಜಿ

೧

ಹೂಬಳ್ಳಿ ಹೂ ಹೂವು, ಧಾರವಾಡದ ಧಾರ
ಅಂಬಿಕಾತನಯ ಪೂಜಿ
ನಾರುಗಂಪಿನ ಮಾಲೆ, ಹತ್ತು ಒಂದರ ಶಾಲೆ
ಆ ಮಹಾ ಶಿವನೊಂದು, ಆ ಬೀಜ ಶಕ್ತಿ-ಪೂಜಿ.

೨

ಮೈಸೂರು ಮಳ್ಳಿಗೂ, ಚಂದನದಬಳ್ಳಿಗೂ
ಮಿಂಚಿನಾಕಳ್ಳಿಗೂ ಜಾಜಿ-ಜೂಜಿ,
ಆ ಹೆಣಕೂ ಹೆಣ್ಣಿಗೂ, ಹೆಣಿಗೆ ಮೂಲಾಧಾರ
ಬ್ರಹ್ಮ ಒಂದಕ್ಕೆ ನಾ ಮಾಯಿ-ಪೂಜಿ.

೩

ಕೊಕ್ಕರೆಯ ಔತಣಕೆ ನಾರಾಯಣನ ನರಿಯು
ಏಕಭೋಜನ ಏಕಪಾತ್ರೆ ಹೂಜಿ
ಒಬ್ಬ ಭೋಜನ ಭಕ್ಷ್ಯ ಅತ್ರಿಪುರತಃ ಸಾಕ್ಷಿ
ಆ ಪುರುಷನೊಬ್ಬನು, ಹಲವು ಪ್ರಕೃತಿ-ಪೂಜಿ.

೪

ಕೃಷ್ಣ ರಾಧೆಗೆ ರಾಜ, ರಾಧೆ ರಂಗನ ಬಾಜಿ
ಪಾಂಡುರಂಗಕ್ಷೇತ್ರ ವಿಟ್ಠಲ ಮಾಜಿ
ಓ ಮಗನೆ, ಓ ಲಾಮಾ, ಬನ್ನಿ ಫಾದರ, ಖಾಜಿ
ಓ ನಮೋ ಅಪ್ಪಾಜಿ, ವಂದೇ ಅವ್ಮಾಜಿ.

- ರಚನೆ : ೧೬-೧೨-೧೯೬೮

---

ಭಾವ : ಧಾರವಾಡ ಹುಬ್ಬಳ್ಳಿ ಜನರಲ್ಲಿ ಸಂಘಟನೆಗಳಲ್ಲಿ ಐಕ್ಯ, ಅನೈಕ್ಯ ಎರಡೂ ಅನುಭವಿಸಿ, ಐಕ್ಯವನ್ನೇ ಪ್ರತಿಪಾದಿಸುವ ಗೀತ.

ಶಬ್ದಾರ್ಥ : ಕಳ್ಳಿ=ಒಂದು ತರದ ಬಳ್ಳಿ, ಮನೆಯಲ್ಲಿ ನೊರಜು ಬರಬಾರದು ಎಂಬುದಕ್ಕೆ ಕಟ್ಟುವ ಬಳ್ಳಿ. ಜಾಜಿಜೂಜಿ-ಜಾಯಿಕಾಯಿ-ಹೂ. ಕೊಕ್ಕರೆ=ನೀರು ಹಕ್ಕಿ. ಗಾಜಿ=ಸ್ವರ್ಗ. ಬಾಜಿ=ಆಟದಲ್ಲಿ ಒಂದು ಗುಂಪು.

ವಿಶೇಷ : ನುಡಿ-೧ : ಕೊನೆಯ ಸಾಲು-ಶಿವ ೧ ಹಾಗೂ ಶಕ್ತಿನೂ ೧ ಕೂಡಿ ೧೧=ಏಕಾದಶ ರುದ್ರರು. ಬೇಂದ್ರೆಯವರ ಜನ್ಮ ದಿನಾಂಕ ೩೧-೧-೧೮೯೬-ಒಟ್ಟು ಬೇರಿಜು-೨೯. ೨+೯=೧೧. ಒಂದು ಇದು ಐಕ್ಯದ ಮಂತ್ರ.

# ೨೬ ಶ್ರೀಮನ್ ಮಹಾಭಾರತ

೧

ಎಲೊ ಚೀನ, ಅಯ್ಯಾ ಎನ್ನುವೆ ದಮ್ಮಯ್ಯಾ
ಸ್ವರ್ಗದಾಸೆಯ ತೋರಿ ನರಕ ತರುವೆ
ಪಂಚಶೀಲದ ಮಾತನಾಡುತ್ತ ಆಡುತ್ತ
ಕೌಟಿಲ್ಯ ನೀತಿಯಲಿ ಬೆನ್ನನಿರಿವೆ.

೨

ಹೋ ಹ್ಯಾಂಗ ಹೊ, ನಿನಗೆ ಸಾಕಾಗದೆ ಈ ರಕ್ತ?
ಯಾಕೊ ಗಂಗಾಪಾನ ಬಯಸಿಬಂದೆ?
ಇಲ್ಲಿ ಸಾವಿರ ಸಗರಪುತ್ರರೋ ಗತಿಗಂಡು
ಬೂದಿಯಾದರು ಋಷಿಯ ಶಾಪದಿಂದೆ.

೩

ಇತಿಹಾಸದಲ್ಲಿ ನಂಬಿಕೆಯಿಲ್ಲ, ಭೂಗೋಲ!
ನೀನು ಗೆರೆ ಹಾಕಿದ್ದೆ ನಿನ್ನ ಬಾಯಿ.
ಮರ್ಯಾದೆ ಮಾತಿನದು. ಹಾದಿಯಲ್ಲವೈ ಅಣ್ಣಾ
ಕರೆವಳು ನಿನ್ನ ಚಾಮುಂಡಿ ತಾಯಿ.

೪

ನಿನ್ನ ಶುಭಲೋಕಾಯತ ತತ್ತ್ವ ಬೇರೆ ಬೇಕೆ?
ನಿನ್ನ ದುರ್ಯೋಧನತೆ ಸಾಕು ಸಾಕ್ಷಿ.
ನೀನು ಕ್ರೂರನು ಕ್ಷುದ್ರ, ನಿನಗೆ ಜೀವನ ಯುದ್ಧ
ನಿನ್ನ ದೃಷ್ಟಿಯೆ-ಸಾವು-ರುಧಿರ ರುದ್ರಾಕ್ಷಿ!

೫

ಆ ತ್ರಿವಿಷ್ಟಪ ತುಳಿದೆ, ನಿನ್ನ ಜನರ ಹಿಳಿದೆ
ಹಿಂಡುತಲಿಹೆ ತೊಂಡು ಸೈನ್ಯ
ಮಂದಗತಿಯಲಿ ಬಹುದು ತಾನು ಅಭ್ಯುದಯ
ದುಡಿಯ ಬೇಕಣ್ಣಾ, ಕಳೆಯಲು ದೈನ್ಯ.

೬

ಬುದ್ಧ ಭಾರತ! ದಾನ ಯುದ್ಧ ಕೊಡುವಿಯಾ?
ಪ್ರಾಚೀನ ಕರ್ಮ ಹತಬದ್ಧನಾದೆ.
ಕಾನ್‌ಫ್ಯೂಸಿಯಸ್ಸಿಗೂ ಲಾವೋಸೆನಿಗೂ ಮತ್ತೆ
ಗೋರಿ ಕಟ್ಟಿಸಲಿಕ್ಕೆ ಸಿದ್ಧನಾದೆ.

೭
ನಿನ್ನ ನೆರೆಹೊರೆಯವನು ಹರಕಾರಿ ಜಾಪಾನು
ಹೀರೋಶಿಮಾದಿಂದ ಕಲಿತ ಪಾಠ
ನಿನಗೆ ಸಾಲದು, ಎಂದು ಉದ್ವೃತ್ತನಾಗುತ್ತ
ನಡೆಸಿರುವೆ ಉದ್ಧತರ ಯುದ್ಧದಾಟ.

೮
ಚಂದ್ರಹಾಸನ ದೈವಲೀಲೆ ಭಾರತಕಿಂದು;
ದುಷ್ಟಬುದ್ಧಿಯ ಮಕರ ಹೃದಯ ನಿನಗೆ,
ಚಂಡಿಕಾಲಯದಲ್ಲಿ ಕಾದಿಹುದು ನಿನ್ನ ವಿಧಿ
ದುರ್ಗೆ; ಕಾಲಿಯ ಬಲವು ನಮಗೆ ಕೊನೆಗೆ.

---

ಭಾವ : 'ಹಿಂದೀ-ಚೀನಿ ಭಾಯಿ ಭಾಯಿ' ಎನ್ನುತ್ತಾ ಪಂಚಶೀಲಕ್ಕೆ ಭಾರತದೊಡನೆ ಚೀನ ಸಹಿ ಹಾಕಿದ ನಂತರ ಚೀನೀ ಆಕ್ರಮಣವು ಭಾರತದ ಗಡಿಯ ಮೇಲೆ ಮಾಡಿದ ಹಿನ್ನೆಲೆಯಲ್ಲಿ ಬರೆದ ಕವನ. ಚಂದ್ರಹಾಸನನ್ನು ಕೊಲ್ಲಲು ಹೋದ ದುಷ್ಟಬುದ್ಧಿ ತನ್ನ ಸಂಚಿಗೆ ತಾನೇ ಬಲಿಯಾದಂತೆ ಚೀನ ದೇಶದ ಸ್ಥಿತಿ ಆಗುತ್ತದೆ ಎಂಬ ಸಂಕೇತ ಭಾವ ಇಲ್ಲಿದೆ.

ಶಬ್ದಾರ್ಥ : ತ್ರಿವಿಷ್ಟಪ=ಸ್ವರ್ಗ. ತೋಂಡು=ಸ್ವೇಚ್ಛಾಪ್ರವೃತ್ತಿ, ತುಡುಗುದನದ ಪ್ರವೃತ್ತಿ. ಹರಕಾರಿ=ಗುಪ್ತಚಾರಿ, ವಾರ್ತಾವಾಹಕ. ಉದ್ವೃತ್ತ=ಗರ್ವದ ನಡತೆಯುಳ್ಳ, ದುರುಳ. ಉದ್ಧತ=ಉದ್ರೇಕಗೊಂಡ, ಉದ್ಧಟ, ಕ್ರೂರ, ಸೊಕ್ಕಿನ.

ವಿಶೇಷ : ಗರ ಮತ್ತು ಕೇಶಿನಿ ಅಥವಾ ಕಾಲಿಂದಿಯ ಪುತ್ರ ಸಗರ. ಇವನು ಗರ್ಭದಲ್ಲಿರುವಾಗ ಸವತಿ ತಾಯಿ ವಿಷಹಾಕಿದ್ದಳು. ಅದನ್ನು ಜೀರ್ಣಿಸಿಕೊಂಡು ಹುಟ್ಟಿದವ ಸಗರ. ಇವನಿಗೆ ಅರವತ್ತು ಸಾವಿರ ಪುತ್ರರು. ಇವರನ್ನು ಕಪಿಲ ಸುಟ್ಟುಹಾಕಿದನು ಎಂದು ಪುರಾಣ ಹೇಳುತ್ತದೆ. ವಿಷಭಾವನೆಯ ಜನರಿಗೆ ಭವಿಷ್ಯಜೀವನ ಇರುವದಿಲ್ಲ, ಅಂಥವರ ನಾಶ ಖಚಿತ.



# ೨೭ ಉದ್ಯೋಗ ಪರ್ವ

೧
ಯಕ್ಷ ರಾಕ್ಷಸ, ಭೂತ ಮೂರವಸ್ಥೆಯ ಕಾಟ
ಕಳೆಯಲಿಕೆ 'ವಾ.ವಿ.ವೆ'. ಮೂರು ನಾಮವೇ ಮಾಟ
ಓ ಷಡ್ಗುಣೈಶ್ವರ್ಯಶಾಲಿ, ಭಗವದ್ದೇಹಿ
ಪಾಂಚಾಲಿ ಪ್ರಾಣಕ್ಕೆ ನೀನೊಬ್ಬನೆ ಸ್ನೇಹಿ.
೨
ಹಗಲಿಗುಡಿಸಿದ ಹಾಗೆ ಕತ್ತಲೆಯ ಸೀರೆಯನು
ಕುರುಡು ಸಂತತಿಯಿಂದ ನೀ ಕಾಯೆ ಧೀರೆಯನು
ದೇವನಿಲ್ಲದ ಧರ್ಮ, ಅದು ತಾನೆ ಅಧರ್ಮ
ಸ್ವಾಭಾವ್ಯನಿಷ್ಠೆಗೋ ಇಷ್ಟ ಸ್ವಾಂತದ ಧರ್ಮ.

---

ಭಾವ : ಭಗವಾನ್‌ವಿಷ್ಣುವನ್ನು ಕುರಿತು ಚಿಂತನ.

ಶಬ್ದಾರ್ಥ : ಸ್ವಾಭಾವ್ಯ ನಿಷ್ಠೆ=ಸ್ವಭಾವವನ್ನು ಅವಲಂಬಿಸಿದ ಸ್ಥಿರವಾದ ಗುಣ. ಸ್ವಾಂತ=ತನ್ನದೇ ಆದ, ತನಗಾಗಿಯೇ.

ವಿಶೇಷ : ಶ್ರಾವಣ ಮಾಸದ ಕೃಷ್ಣಾಷ್ಟಮಿ, ರೋಹಿಣಿ ನಕ್ಷತ್ರ ಬುಧವಾರ ಮಧ್ಯರಾತ್ರಿ ವಿಷ್ಣು ಭೂಲೋಕದಲ್ಲಿ ಅವತರಿಸಿದನು. ರೋಹಿಣಿ ನಕ್ಷತ್ರದ ಚರಣಾಕ್ಷರಗಳು- ವಾ=ವಾಸುದೇವ; ವಿ=ವಿಷ್ಣು; ವೆ=ವೆಂಕಟ (ತಿರುಪತಿ) ಎಂದಿವೆ. ವಾಸುದೇವನೇ ಕಲಿಯುಗದ ಸಮಾಪ್ತಿಯ ಕಾಲಕ್ಕೆ ಅಶ್ವಾರೋಹಿಯಾಗಿ ವೆಂಕಟನಾಗಿ ಜಗದುದ್ಧಾರ ಮಾಡುತ್ತಾನೆ. ಅನಂತರ ಮತ್ತೆ ಕೃತಯುಗದ ಪ್ರಾರಂಭವೆಂಬ ಹೇಳಿಕೆ ಇದೆ. ಷಡ್ಗುಣೈಶ್ವರ್ಯಶಾಲಿ ಭಗವಾನ್ ವಿಷ್ಣು ಇವನಲ್ಲಿ ಇರುವ ಆರು ಗುಣಗಳು - (೧) ಜ್ಞಾನ (೨) ಐಶ್ವರ್ಯ (೩) ಯಶಸ್ಸು (೪) ಧರ್ಮ (೫) ಶ್ರೀ (೬) ವೈರಾಗ್ಯ.

# ೨೮ ಭೀಷ್ಮ ಪರ್ವ

ಜನಾ ಕಾಯ್ತಾರ ದನಾ
ನೋಡ್ತಾರ ದಿನದಿನಾ
ಮಾಡ್ತಾರ ಆದರ್ಶಾಂಗ ಆಟಾಽ ॥ ಪಲ್ಲವಿ ॥

೧
ಮೇಯೋದು ಮೆಲಕೋದು
ಮಲಗೋದು, ತೊಲಗೋದು
ಅಲ್ಲಿವರೆಗೂ ಬರಿ ಹಾಽ ರಾಽ ಟಾ.

೨
ರಾಟಾಳ ತಿರುಗತಽದ
ತುಂಬತಽದ, ತೀರತಽದ
ಬ್ಯಾರೇದವರ ತ್ವಾಟಾ ಐತಿ ಸಾಗು.

೩
ಮೆರವಣಿಗಿ ಸಿಂಗಾರದಲೆ
ದಿಮಾಽಖಾ ಮಾಡತಾರಽ
ಅಟ್ಟದ ಮ್ಯಾಲೆ ಕುಣಧ್ಹಾಂಗ ಸೋಗು

---

ಭಾವ : ದನಗಳ ಜೀವನ ಪದ್ಧಿತಿಯನ್ನು ಅನುಸರಿಸುತ್ತಿರುವುದು ಇಂದಿನ ಭಾರತದ ಭೀಷ್ಮ ಪರ್ವ.

ಶಬ್ದಾರ್ಥ : ಭೀಷ್ಮ=ಗಂಗೆಯ ಮಗ, ಭಯಾನಕ ಸ್ಥಿತಿ, ಗಂಡಾಂತರ.

ವಿಶೇಷ : ಮಹಾಭಾರತದ ಭೀಷ್ಮ ಕಾಯಂ ಶರಶೆಯ್ಯೆಯ ಮೇಲೆ ಮಲುಗಿದ್ದಾನೆ. ಭಾರತದ ಜನತೆಯ ನೀತಿ ಉತ್ತಮವಾಗುವವರೆಗೆ ಅವನು ಸಾಯಲಾರ ಎಂಬ ಸಂದೇಶ ಈ ಕವನದ ಧ್ವನಿ.

# ೨೯ ದಿವ್ಯ ಕರುಣೆಯ ಪುಷ್ಪ

೧
ಯಾವ ಹುಲ್ಲಿಗೆ ಎಂಥ ಹೂವಿದು ?
ಕೃಪೆಯೆ ಅರಳಿದೆ ಅಲ್ಲವೇ ?
ನೆತ್ತಿ ಬಿಸಿಲಿಗೆ ಕತ್ತನೆತ್ತಿದೆ
ದಿವ್ಯತೆಯು ಇಲ್ಲಿಲ್ಲವೆ ?
೨
ಗಂಧದೊಂದೇ ಕೊರತೆ ಇಲ್ಲಿದೆ
ಅದುವು ಇನ್ನೊಡಮೂಡಲು
ದೇವ-ದೇವತೆ ಜಾತ್ರೆ ಬಹದೋ
ಇಂಥ ಅದ್ಭುತ ನೋಡಲು.
೩
ತಂತಿ ತಾನೇ ಹಾಡನಾಡಲು
ವೈಣಿಕನು ಬೇಕೇಕಲಾ ?
ಕೊಳಲು ತಾನೇ ಕವನ ಮಾಡಲು
ಕೃಷ್ಣ ತಾನಿರಬೇಕಲಾ !
೪
ಕಬ್ಬು ಕಣದಾಗಣಿಕೆ ಅಲ್ಲೋ
ತಾನು ಸಾಕ್ಷಾತ್ ಬೆಲ್ಲವು
ಕಬ್ಬು ಸಕ್ಕರೆ, ಮಾತು ಸಕ್ಕರೆ
ಸಿಹಿಯ ಮೈಮೆಯು ಎಲ್ಲವು.
೫
ಇದನು ಮೆರೆಸಲು ಸಾಲದೋ ಆ
ಸಾವಿರದ ಕಣ್ಣಿಂದಣಾ
ಚಂದನದ ಗರಿ, ಚವರ ಮಾಡಣಾ
ನಂದನವೆ ತಾ ಕುಂದಣಾ

- ರಚನೆ : ೪-೮-೧೯೭೦

---

ಭಾವ : ಹೂವಿನ ಅರಳುವಿಕೆಯಲ್ಲಿ ದಿವ್ಯತೆಯನ್ನು ಕಂಡು ಹಾಡಿದ ಹಾಡು.

# ೩೦ ಘನ

ಘನವನೆ ಮನಕ್ಕೆ ಎಳೆಯದಿರು
ಘನಘನದಲಿ ಘನ ಬೆಳೆಯುತಿರು ॥ ಪಲ್ಲವಿ ॥

೧
ಬೇರಲಿ ಬುಡದಲಿ ತೊಂಗೆತೊಂಗೆಯಲಿ
ಎಲೆ ಎಲೆಯಲಿ ಹೂ ಹೂವಿನಲಿ
ಕಾಯಿ ಹಣ್ಣಿನಲಿ, ಬೀಜಗಣ್ಣಿನಲಿ
ಒಂದಕ್ಕೇ ಒಲವಾಗುತಿರು.
ಒಂದರಲ್ಲೇ ಹಲವಾಗುತಿರು.

೨
ಇರು-ಅರಿ-ಹರಿಯೇ
ಮರೆಯಲೆ ತೆರೆಯೋ
ದೇವಜಗತ್ತಿನ ಸಂಧಿಯು ನೀ
ಜೀವಜೀವ ಸಂಬಂಧಿಯು ನೀ
ಬಂಧಿಯು ನೀ ಪ್ರತಿಬಂಧಿಯು ನೀ
ಒಂಟಿಗ ನೀ, ಜಗದಂಟಿಗ ನೀ

೩
ರಸಪುರುಷನೇ ಬಾ;
ಚಿತ್‌ಸಾಕ್ಷಿಯೆ ಬಾ.

---

ಭಾವ : ಬಾಳಿನ ಘನತೆ ಜಗತ್ತಿನ ಸಂಬಂಧಸೂತ್ರ ತಿಳಿದುಕೊಳ್ಳುವದರಲ್ಲಿದೆ. ಅನೇಕ ಮುಖದ ವ್ಯಕ್ತಿತ್ವ ವಿಕಾಸ ಅವಶ್ಯ.

# ೩೧ ಕನ್ನಡಕಣ್ಣು

೧

ಆತನ ತಾನಕೆ ತರತಮಿಸಿತು
ಬಸಿರಲಿ ಮಲಗಿದ ಬಯಲ ಹುಡಿ
ಸಂಯಮ ಹೋಗಿ ಮಧುಮಯವಾಗಿ
ಮೈ ಮೈ ಮಡಿಚಿತು ಗುಡೀ ಗುಡೀ.

೨

ಎದ್ದರಾಮಿ, ನೀ ಗುಡ್ಡ ಕಂಡು ಮರಳೇಕೆ ಬಂದೆ ಮಳ್ಳಿ
ಅಲ್ಲಿತ್ತು ಬೇವು, ಅಲ್ಲಿತ್ತು ಕಾವು, ಆ ಬೇಲಿಗಿತ್ತು ಕಳ್ಳಿ.

ಎಣಿಕೆ ಇಲ್ಲದಾ, ನೆನಿಕೆ ಏನು, ಎಂಟೊಂದ ಕಪ್ಪುಗಂಟು
ರಾಧೆಗಾಗಿ ಪಾಥೇಯ ಅಲ್ಲಿ ಆ ತೀರದಲ್ಲಿ ನಂಟು.

ರಾಡಿಯೊಳಗ ರೇಗಾಡಬ್ಯಾಡಾ 'ರೇ' ರಾಜ್ಯ ಬಿಟ್ಟು ಬಾರೋ
ನಿನ್ನೆ ಯಾರೋ? ಆ ನಾಳೆ ಯಾರೋ? ಇಹುದೊಂದೆ ಇಂದಿನೂರೋ

ಕುಂಟು ನೆಪವ ನೀ ಹೇಳಬೇಡ ಆ ಮುಂಡ-ತೊಂಡು-ಬೆಂಡು
'ಉಂಟು' ಎಂಬುದನೆ ಉಂಡು ನೋಡು, ಇದಬಿಟ್ಟು ಎಲ್ಲ ಜೊಂಡು.

೩

ಎರೇ ಭೂಮಿಯೊಳಗ, ಕರೇ ಎತ್ತು ಹೂಡಿ, ಬಿಳೀ ಜೋಳ ಬೆಳದಿ
ಹೊಲಾ ಕಾಯಹೋಗಿ, ಮಲಗಿ ನೀ ಬೆಳದಿಂಗಳನ್ನೆ ಕಳದಿ.

ಚೆಳ್ಳಹಣ್ಣು ತಿನಸ್ಯಾಳೊ ಮಗನ, ಎಲ್ಲ್ಯಾಳ ನಿನ್ನ ಕೆಳದಿ?
ಓಡಿಹೋದಳೋ, ಭಾಗ್ಯವಂತ! ನೀ ಬದುಕಿಕೊಂಡು ಉಳದಿ.

ಮುಚ್ಚಂಜಿ ಇತ್ತು, ಆ ಮಬ್ಬಿನೊಳಗ, ನೀನೇನು ಅಲ್ಲಿ ಕಂಡಿ?
ರವಿಗೆ ಕವಿಗೆ ಆ ಅಸ್ತ ಇಲ್ಲ; ಅವಗುಂಟು ಉದಯದುಂಡಿ!

ಎರಡು ಮಗ್ಗಲಾ; ಎರಡು ಉಸಿರು ಎರಡೆರಡೆ ಒಂದಿನೊಲವು?
ಒಂದೇ ಪ್ರೀತಿ, ಹಲವಾರು ಜನ್ಮ, ತಿಳಿಯಬೇಕು ಒಂದೆ ಬಲವು.

ಉರವಲ ಕಟಗೀ, ಎರವಲ ತಂದು, ಸಾಗಿತೇನು ಬಾಳು?
ಮುತ್ತು ಯಾರು ತಿಂದಾರು? ಬೇಕು ಅಕ್ಕಿ, ಜೋಳಾ, ಕಾಳು.

೪

ಒಲಿದವಳು ಸುಳಿದವಳು
ಸೋಗೆ ಬಿಚ್ಚಿಸಿದವಳು
ನವಿಲಾಟ, ನವಿರಾಟ ನಟಿಸಿದವಳು!

೫

ನನ ಹಾಡು, ಹೃದಯದ ಜಾಡು
ಕೇಳನೆ? ಆದರೆ ಕೆಪ್ಪ, ಹೇಳುವದಾರಿಗೆ ಅಪ್ಪ?
ಇನ್ನೊಬ್ಬರ ಕೈ ಕಷ್ಟಕೆ ತಲೆಗೊಡದೆ
ಕೇಶಕ್ಲೇಶವ ಸಹಿಸುವ ಕೆಲಸಿಗಗೆ
ನವಿನವಿರಿಗೆ ಬವರದ ಗಂಟು
ನೆರೆಹೊರೆ ಈ ನಂಟು

೬

ಎಗರಿ ಬಿದ್ದ
ಚಿಗರಿನ್ಹಾಂಗ
ಒಗರು ನಿಂದು
ಹೋಗೇ ಇಲ್ಲಾ.
ಬೊಗರಿ ಹಾಂಗ
ಆಡ್ತಿ ನೀನು;
ಭಿಂಗರಿ ಹಾಂಗ!
ಶೃಂಗಾರಿ ಹಾಂಗ!
ಮುಂಗಾರಿಯೊಳ್ಗ
ಏನೈತಿ?
ಮಳಿ ಬಿದ್ದರ ಎಲ್ಲಾ ಪಾಡು,
ಎತ್ತೈತಿ.
ಒಕ್ಕಲಿಗನ ಸೊತ್ತಾದಿ
ತೊತ್ತಾದಿ, ತುಳಿಳಾದಿ.
ಗೂಳಿ ಹಾಂಗ ತಳಿ
ಕೂಲಿ ಹಾಂಗ ಬೆಳಿ.

೭

ನೀನೇ ದೇವ
ನೀ ನನ್ನ ಕಾವ
ಏನಲ್ಲ ನೀನು ನನಗೆ?

ಮೊದಲಲ್ಲ ನೀನು
ಆ ಮಧ್ಯ, ಕೊನೆಗೆ
ಏನಲ್ಲ ನೀನು ನನಗೆ?

ನನ್ನ ಹಾಲು
ನಿನ್ನಲ್ಲಿ ಕಾದು
ಕೆನೆಗಂಡಿತಲ್ಲ ಕೊನೆಗೆ.

೮

ಕವಿ ಹೊತ್ತು ಈಗ ಆಗ್ಯಾನ ಕಾವಿ, ಬಾಜಾರ ಮಾಲು ಅಲ್ಲ, ಹೃದಯ
[ಒಳಗಡೆಗೆ ಬಾರೊ, ಕಿವಿಗೊಟ್ಟುಕೇಳೊ, ನೀನೆ ನನ್ನ ಸಹೃದಯ]

ಕಾವಿಯುಟ್ಟ ಕವಿ ನಾನು, ಕಾದು ಕೂತೇನಿ ಒಲಿಯ ಒಳಗ
[ಉಫ್ ಎನ್ನು, ಕಂಡೀತು ಕೆಂಡ, ಬೆಂಕಿ ಐತಿ, ಬೂದಿಯಲ್ಲಿ ಕೆಳಗ]

ಭಾವಿ ಅಲ್ಲಿ ಸೆಲಿಯು, ತಾನೊಂದೆ ಆದರ ಬೆಲೆಯು
ಮುಳುಮುಳುಗಿ ನೀನು, ನೋಡದಿರು ಮಳ್ಳ, ಓ ಹತ್ತದಣ್ಣ ನೆಲೆಯು.

ಸಿಗಿಸಿಗಿದು ಬಗಿದು ಏನೇನು ಸಿಗದು, ಆದೀತು ಬಯಲ ಕೊಲೆಯು
[ಒಳಗೊಳಗೆ ನುಗ್ಗಿ ಒಂದಾಗಿ ಹೀರು; ತಿಳಿದೀತು ನಿನ್ನ ಕಲೆಯು]

---

ಭಾವ : A Dravidian Etymological Dictionary, By-T. Burrow And M. B. Emeneau, The Clarendon Press, Oxford, 1961 ಇದನ್ನು ಅಭ್ಯಸಿಸುವಾಗ ಕನ್ನಡಕಣ್ಣಿಗೆ ಕಂಡ ಉಕ್ತಿಗಳ ಸೃಷ್ಟಿ

ಶಬ್ದಾರ್ಥ : ಜೊಂಡು=ಪಾಚಿ, ಹಾವಸೆ, ಒಂದು ಜಾತಿಯ ಹುಲ್ಲು, ತುಳಿಲ್-ತುಳಿಳ್+ಆದಿ=ತುಳಿಯಲ್ಪಟ್ಟವನಾದಿ, ಹಿಂಸೆಗೆ ಗುರಿಯಾದಿ. ತೊತ್ತಾದಿ=ಸೇವಕನಾದಿ, ಊಳಿಗನವನಾದಿ.



## ೩೨ ಸಮೀಕ್ಷಣ

೧
ಆಚೆ ಈಚೆಗೆ ಚಾಚಿಕೊಂಡಿದೆ ಪಕ್ಷಿಪಕ್ಷದ ರಕ್ಷಣ
ಜೋಕೆ ತೂಕದ ತೋಲದಲ್ಲಿದೆ ಮಧ್ಯಬಿಂದು ಸಮೀಕ್ಷಣ.
ಭಕ್ತಿಸಂವಿತ್ತೇ ಸುಸರ್ಪಣ; ಬೇಡ ಬೇರೆಯ ತರ್ಪಣ
೨
ಭಗವದರ್ಪಣ, ಭಗವದರ್ಪಣ, ಇರಲಿ ಜೀವನ ದರ್ಪಣ!
ಏಕೆ ಆಗ್ರಹ? ಏಕೆ ಪ್ರಗ್ರಹ? ಏಕೆ ಸೀಳುವ ವಿಗ್ರಹ?
ಇರಲಿ ಸಂಗ್ರಹ, ಮೇಲೆ ಉದ್ಗ್ರಹ, ಬರಲಿ ಭಗವದನುಗ್ರಹ.

---

ಭಾವ : ಭಗವದನುಗ್ರಹವಾಗಬೇಕಾದರೆ ನಾವು ಸಹಸ್ರಾರದವರೆಗಾದರೂ ಏರುವ ಸಾಧನೆ ಮಾಡಲೇಬೇಕು. ಆಗ ಅನುಭಾವ ಪ್ರತ್ಯಕ್ಷ

## ೩೩ ನಮ್ಮ ತಾಯಿ ಮಾಹೂರಗಡದಾಕಿ!

೧

ನಮ್ಮ ತಾಯಿ ಮಹೂರಗಡದಾಕೀ !
ಕತ್ತಲಿಯಲ್ಲಿ ಹಗಲು ಪಂಜು ಹಿಡಿದಾಕಿ.

೨

ರಥಾ ಏರಿ, ಮದ್ದಾನಿ ಎಳಿಸಿ ದುಡದಾಕಿ
ರಥಕ್ಕಿಂತ ಮುಂದ ತಾನ ನಡದಾಕಿ.

೩

ನತ್ತಿನಾಕಿ, ಗತ್ತಿನಾಕಿ, ಸುತ್ತಿನಾಕೀ
ಹೊತ್ತೊತ್ತಿಗೆ ನಾಡಿಗೆಲ್ಲಾ ಒದಗೋ ಆಕಿ !

೪

ಹೃದಯದಾಗ ಮೂರು ದೇವರ ಪಡೆದಾಕಿ
ಉಧೋ ಅನಿಸಿ ಓಂ ತಾನ ನುಡಿದಾಕಿ !

೫

ಹೇಳೋದೆಲ್ಲಾ ಹೇಳೇನಿ, ಉಳಿದಿಲ್ಲ ಬಾಕಿ
ಲೆಕ್ಕಾಹಾಕಿ ಮೂಡವ್ವ ಜನ ಜ್ವಾಕಿ.

೬

ಬೇಕು ಬೇಡ ನೋಡಿಕೊಂಡು ಸಾಕಿದಾಕಿ
ಜನ್ಮ ಮರಣ ಮುಕ್ತಿಗಾಗಿ ಹಾಕಿದಾಕಿ !

೭

ನಗಾರಿ ಡೊಳ್ಳು ಕೊಳಲು ಕೊಂಬು ಸದ್ದಿನಾಕಿ
ನೀನ ತಾಯೀ ತಾಪತ್ರಯದ ಮದ್ದಿನಾಕಿ !

೮

ಎಲ್ಲಾರ ನಾಲಗಿ ಮ್ಯಾಲೆ ಇರುವಾಕಿ !
ಎತ್ತೆತ್ತು ಹಜರ ಇರು, ನಜರ ಹಾಕಿ.

೯

ಸಾವಿರ ಚವರೀ ಬೀಸಿ, ಬೀಸಿ ಪ್ರಾಣ ತ್ರಾಣ ಉಳಿಸಿದಾಕಿ
ಆರ್ತಿ, ಕೀರ್ತಿ ಬೆಳಗಿಸಿ ರಾಜ್ಯೇ ನಡೆಸಿದಾಕಿ !

- ರಚನೆ : ೨೬-೫-೧೯೭೩

---

ಭಾವ : ನಾಂದೇಡ ಊರಿನ ಹತ್ತರ ಇರುವ ಮಾಹೂರಗಡದ ಎಲ್ಲಮ್ಮ- ರೇಣುಕೆಯ ಶಕ್ತಿ ಚಿಂತನ.

ಶಬ್ದಾರ್ಥ : ಪಂಜು=ದೀವಟಿಗೆ, ಸೂಟಿ. ಬಾಕಿ=ಉಳಿತಾಯ, ಉಳಿಕೆ, ಸಿಲ್ಲಕು. ಜ್ವಾಕಿ=ಜೋಕೆ=ಎಚ್ಚರಿಕೆ, ಹಿಡಿತ. ತಾಪತ್ರಯ=ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ-ಮೂರುಬಗೆಯ ಕಷ್ಟಗಳು. ಹಜರ=ಹಾಜರ=ಹಾಜರೀ-(ಫಾರಸಿ)=ಪ್ರತ್ಯಕ್ಷ, ನಜರ=ನಜರು=ಗಮನ, ನಿಗಾ, ಲಕ್ಷ್ಯ.

# ೩೪ ಈಗ ಎದ್ದೆ

೧
ಆಗ ಆಗ ಆವಾಗ ಆಗು, ಇರಲಿಲ್ಲದಾಗ ಇದ್ದೆ
ಈಗ ಈಗ ಈವಾಗ, ಬೀಜ ಬಿತ್ತಾಗ ನೆಲಕೆ ಬಿದ್ದೆ.
೨
ನಿದ್ದೆ ನನ್ನ ನಿಜಕವಚವಾಗಿ, ಅವಚಿತ್ತು ಆ ಅಚಿತ್ತು
ಕಿಂಚಿತ್ತು ಇತ್ತು, ಕಿಂಚಿತ್ತು ಇಲ್ಲ, ಕಿಂಚಿತ್ತು ಹತ್ತು ಸುತ್ತು
೩
ಸತ್ತು ನಾನು ಬದುಕಿದೆನು, ಬಾಳಿನಲೆ ಸತ್ತ್ವವಾಗಿ ಮೊಳೆತೆ
ಉಳ್ಳ ಒಡವೆ ಎಳ್ಳಷ್ಟು ಕಡಿಮೆ ಆದೀತೆ ? [ಇಲ್ಲಾ ಕೊರತೆ]

---

ಭಾವ : ಪ್ರತಿವರ್ಷ ಸಸ್ಯ ಬಾಡಿ, ನೆಲಕ್ಕೆ ಬಿದ್ದು ಮತ್ತೆ ವಸಂತಕ್ಕೆ ಚಿಗುರುವಂತೆ, ನಮ್ಮ ಬದುಕಿನಲ್ಲಿಯ ದೋಷ ಸಾಯಬೇಕು, ಗುಣ ಚಿಗುರಬೇಕು ಎಂಬ ಸಂದೇಶ ಇದೆ.



# ೩೫ ವಿಚಾರ ಬಿಂದು

ಯುದ್ಧ ಯಾವ ಗದ್ದಲವು ನನಗೆ? ಏಕಾಂತವಾಗಿ ಸಂತೆ
ಮಂದಿಯಲ್ಲಿ ಬಂದೊಬ್ಬ, ಕಡಲ ನಡುಗಡ್ಡೆಯಾಗಿನಿಂತೆ.
ಕಾಮಧೇನುವಿನ ಬೆನ್ನನೇರಿ ಕೂತಿತ್ತು ಒಂಟಿ ನೋಡ
ಅದರ ಮೇಲೆ ಸವ್ವಾರಿಯಾಗಿ ಏರಿಹುದು ಸಿಂಹ ಕೂಡ !

---

ಭಾವ : ಪ್ರೇಮ ಒಂದು ಕಲಹ, ಯುದ್ಧ. ಈ ಯುದ್ಧದಲ್ಲಿ ಕಾಮಧೇನು, ಒಂಟಿ, ಸಿಂಹದಂಥ ಜನರು ಎದುರಬದುರಾಗುವ ಸಂಭವ ಉಂಟು. ಹಾಗೆ ಆದಾಗ ವಿಚಾರ, ವಿವೇಕ ಮಾಡಿ ಹೆಜ್ಜೆ ಹಾಕುವದು ಅವಶ್ಯ.



# ೩೬ ನರ್ಮಹಾಸ

೧

ಪರ್ಸಿಯಾ ದೇಶದಾ ಮಣ್ಣಿಗೂ ಕಂಪುಂಟು
ಹೂವುಗಳ ಕತೆ ಬೇರೆ ಕೇಳಬೇಕೆ ?
ಪರ್ಸಿಯಾ ದೇಶದಾ ಕಣ್ಣಿನಲಿ ನಯವುಂಟು
ಹೆಣ್ಣಿನಾ ಹಾಡನ್ನು ಹೇಳಬೇಕೆ ?

೨

ಪರ್ಸಿಯಾ ದೇಶದಾ ಮಾತಿನಲಿ ಕುಸುರುಂಟು
ಕವಿ ಬೇರೆ ಕವನಗಳ ಕಟ್ಟಬೇಕು
ಪರ್ಸಿಯಾ ದೇಶದಾ ಉಸಿರಿನಲಿ ಕುಣಿತವಿದೆ
ರಮಿಸಿ ಆಡಿಸೆ, ಮೈಯ ಮುಟ್ಟಬೇಕು

೩

ಓಮರನ ಕಾವ್ಯವೋ ಜಾಣು ನುಡಿ ಹಾರಾಟ
ಕಲಿಸಬಹುದು ಉಂಟಲ್ಲಿ ಪ್ರಾಸ
ನಾಲ್ಕೆ ಪಾದಗಳಲ್ಲಿ ನಲುಮೆ ನಲಿದೀತು
ರಾಸಲೀಲೆಯ ಜಾತಿ ನರ್ಮಹಾಸ

- 'ಮಂದಹಾಸ' ಎಂಬ ಶೀರ್ಷಿಕೆ ಇತ್ತು

---

ಭಾವ : ಓಮರ್ ಖಯಾಮ್‌ನ ಕಾಲ ೧೦೫೦-೧೧೩೨. ಘೀಯಾತ್ ಉದ್ದೀನ್ ಅಬುಲ್ ಫಾತ್ ಓಮರ ಬಿನ್ ಇಬ್ರಾಹಿಂ ಅಲೆ ಖಯ್ಯಾಮಿ ಎಂಬುದು ಪೂರ್ಣ ಹೆಸರು. ಇವನು ಪರ್ಸಿಯಾ ದೇಶದವನು. ರುಬಾಯಿ ಛಂದಸ್ಸಿನ ಚೌಪದಿ ಅಭಿವ್ಯಕ್ತಿಯ ಮಾಧ್ಯಮ. ಜ್ಯೋತಿಷ್ಯ, ಬೀಜಗಣಿತ, ಕ್ಷೇತ್ರಗಣಿತ, ಭೌತ ಶಾಸ್ತ್ರ ಪಾರಂಗತನಾಗಿದ್ದ. ದಾರ್ಶನಿಕತೆ, ವಿವಿಧ ವಿಷಯ ವ್ಯಾಸಂಗ ಬೇಂದ್ರೆಯವರ ಒಲವಾಗಿದ್ದರಿಂದ ಅವರು ಓಮರನ ಚೌಪದಿಗಳ ಪ್ರೇರಣೆಯಿಂದ ಭಾವಾನುವಾದ ಹಾಗೂ ಸ್ವತಂತ್ರ ರಚನೆ ಮಾಡಿದರು. ಓಮರನ ಕಾವ್ಯದ ವೈಶಿಷ್ಟ್ಯ ಕುರಿತು ರಚಿಸಿದ ಮೂರು ಚೌಪದಿಗಳು ಇವು.

ಶಬ್ದಾರ್ಥ : ರಾಸಲೀಲೆ=ಕೃಷ್ಣ, ರಾಧಾ, ಗೋಪಿಯರ ಭಾವ ನೃತ್ಯ, ಗೌಳಿಗರ ವರ್ತುಲಾಕಾರದ ನೃತ್ಯ. ನರ್ಮಹಾಸ=ವಿನೋದದ ಹಾಸ್ಯ, ವಿನೋದದ ನಗೆ, ಆನಂದ.

ವಿಶೇಷ : ಈ ಕವನದ ಮೂಲ ಪ್ರತಿ ಸಿಕ್ಕಿರಲಿಲ್ಲ ಆಗ ೧೯೮೭ರ ಮುದ್ರಣದ ಕಾಲಕ್ಕೆ ಕವನಕ್ಕೆ- ಮಂದಹಾಸ ಎಂಬ ನಾಮಕರಣ ಮಾಡಿ, ಕೊನೆಯ ಸಾಲನ್ನು ಊಹಿಸಿ ರಚಿಸಿದ್ದೆ. ಈಗ ಮೂಲ ಪ್ರತಿಯಂತೆ ಕವನವನ್ನು ಮುದ್ರಿಸಲಾಗಿದೆ.

# ೩೭ ಚಾಂಗುಭಲಾ

೧
ನಾನು ಯಾರೂ ಅಲ್ಲಾ
ನೀನು ಯಾರೂ ಅಲ್ಲಾ
ನಾನು ನೀನು ಇರುವೆವಲ್ಲಾ;
'ಇಲ್ಲ' ಎಂದು ಆಗಲೊಲ್ಲ
ಇಲ್ಲಿ ಇದೆ ಪೇಚು.
೨
ಸತ್ತವನ್ಯಾವ? ಇರುವನ್ಯಾವ?
ಹೆಣಕ್ಕೆ ಬೇಕೆ ಸ್ಮಾರಕ?
ಇದ್ದವಗೇಕೆ ಶಿರಪೇಚು?
೩
ಸದ್ದೆ ಇರದೆ ಇರಲು ಸಲ್ಲಾ
ಕಲ್ಲಿಗು ಇದೆ ನಾದಾ;
ಕೇಳುವವನು ಇದ್ದರೇನೆ
ಅದರ ಆಸ್ವಾದಾ.
೪
ಸವಿಯುವ ಶಿವನೇ ಇಲ್ಲಾ
ಪಂಗು ಅಲ್ಲ ಆ ಪಾಂಗು
ಅದು ಇದು ಎತ್ತು
ವಿಷ ತಾನೆ ಸಾಯಲಿಲ್ಲ
ಕಂಠವಿದ್ದು ಏನು ಭಲಾ?
ಅಲ್ಲಿ ಸಪ್ಪಳಿಲ್ಲಾ!
೫
ಭಲಾ ಇರದೆ ವ್ಯರ್ಥ ಛಲಾ
ಜಂಗು ವ್ಯರ್ಥ ಕಲಕಲಾ
ಚಾಂಗು ಭಲಾ
ಗುಂಗು ಅಲ್ಲಾ.
ಕಿವಿಯೆ ಇಲ್ಲಾ
ಕವಿಯೆ ಇಲ್ಲಾ
ಬೊಬ್ಬೆ ಕುಟ್ಟಿ ಏನು?

೬
ಹಾಳಿಗಿಂತ ಬಾಳು ಮೇಲು
ಬದುಕು ಮೂಲ ಮಣ್ಣು
ಕಣ್ಣೇ ಇಲ್ಲಾ; ಮಣ್ಣೇ ಇಲ್ಲಾ
ಪೂರ್ಣತೆಯೇ ಹಣ್ಣು.
೭
ಅನಸೂಯೆಯ ಅತ್ರಿ ಗುಣಾ
ತ್ರಿಗುಣಕೆ ರೋಗಾ
ಆರೋಗ್ಯವು ಭುವನಭಾಗ್ಯ
ಸಮಯಪ್ರಜ್ಞೆ ಯೋಗಾ.
೮
ಬೇಬರ್ಸಿಯ ಸದ್ದಡಗಲಿ
ಗದ್ದಲವೋ ಗದ್ದಲಾ
ಕೆಂಡವಿತ್ತು ಬೂದಿ ಇದೆ
ಅಮರ ರತ್ನ ಇದ್ದಿಲಾ!
೯
ಕೋಣನ ಬೈದೇನು ಫಲಾ?
ಸ್ವರ ವ್ಯಂಜನ ಸಹಿತ
ಕೋಣನಿಗೋ ಯಮನೆ ಸ್ವಾಮಿ
ಅವನು ಪ್ರೇಮ ರಹಿತ.
೧೦
ಕತ್ತೆ ವೇದ ಹೇಳಿಯೇನು?
ಶ್ರೋತ್ರಿಯನೇ ಇಲ್ಲಾ
ಕಿವಿಗೆ ಇದೆ ಎಲ್ಲ ಶ್ರುತಿ
ದಿವ್ಯ ಧ್ವನಿಯೆ ಮೂಲಕೃತಿ
ಜೊಲ್ಲು ಹೇಳಸಲ್ಲಾ.

೧೧
ಕಾಲ ಇಲ್ಲಾ, ತಾಲ ಇಲ್ಲಾ
ಮೇಳವಿದ್ದರೇನೆ ಎಲ್ಲಾ
ಸತ್ತ ಚರ್ಮ ಮೆತ್ತಿ ಏನು?
ಡಗ್ಗಾ ಗಿಗ್ಗಾ ಕುಟ್ಟ ಬೇಡ
ಅದು ಸೊಲ್ಲೆ ಅಲ್ಲಾ.
೧೨
ಸಭೆಯು ಇಲ್ಲಾ, ಸಭ್ಯರಿಲ್ಲಾ
ಸಹೃದಯರು ಇಲ್ಲಾ
ನೀಲಾಂಬರಿ ರಾಗ ಸಾಕು
ಯಾರಿಗೆ ಬಾಯ್ಬಿಲ್ಲಾ?

- ರಚನೆ : ೨೪-೮-೧೯೭೪

---

ಭಾವ : ಒಳ್ಳೆಯ ನಡತೆ, ಸಹೃದಯತೆ ಬೆಳೆಸಿಕೊಳ್ಳದಿದ್ದರೆ ಒಳ್ಳೆಯದಾಗದು, ಒಳ್ಳೆಯ ಕಾಲ ಬಿಸಿಲುಗುದುರೆ!

ಶಬ್ದಾರ್ಥ : ಪಂಗು=ಅಂಗವಿಕಲತೆ. ಶಿರಪೇಚು=ಶಿರೋಭೂಷಣ, ಅಲಂಕಾರ. ಚಾಂಗು ಭಲಾ=ಒಳ್ಳೆಯ ಶುಭದ ಹೇಳಿಕೆಗಳು. ಬೇಬರ್ಸಿ=ದನಗಳಿಗೆ ಬೈಯುವ ಬೈಗಳ.



## ೩೮ ಅಗ್ನಿದಿವ್ಯ

೧
ಬೆಂಕಿಯಾ ಹೀಟ ಹಿಡಿದಾರ ಪಾದರಿಗಳು!
ತಿಂಡಿಯಾ ತಿನಿಸು ತೀರಿಸುವಾಗ
ಆಗ ಜನಿಸಿದ ಜಿನಸು ಬೇರೆ ಏನೂ ಅಲ್ಲ
ಕಾಯುತ್ತಾರೆ ಜನ, ಕಾಯಿಸುತ್ತವೆ ದನ.
೨
ದನ-ಜನ, ದೂರುದೂರಿಲ್ಲ, ಕಾಣಿರೋ
ಇದೂರು ಅದು ಕಾಡು; ಬೇರೆ ದೂರೇಕೆ?
ಆ ದರಿಗೆ ಮಾದರಿಗೆ ಪಾವರಿಯ ಹೂ ಹೂವು
ಹೊಲೆಯು ಹೋಗಿಲ್ಲ, ಪುಂಡಿಚೆಟ್ಟು ಬೆಳಗಿಲ್ಲ.
೩
ಆಗಸಹೊಯ್ಲಿಗೆ ಸಿಕ್ಕು ನೀಲಿಗೆಡದಿದೆ ಬಯಲು
ಬಸಿರಲ್ಲಿ ಬಂಗಾರ, ಮೈಬೂದಿ ಅಂಗಾರ
ಅಸರಕ್ತದವನಿಗೇಕೆ ಮತ್ತೆ ನಿರುಕ್ತಾ
ವೇದ ದೇವನೆ, ಬಾಳಿನ ಶೃಂಗಾರ.
೪
ಬದುಕುವಾ ಶಿಶುವಿಗೇ ನಾಳೆ ನಾಯಕ ಪಟ್ಟ
ದಾದಿಗಿದೆ ಆರೈಕೆ ಹಾದಿ-ಕಾಲಕ್ರಮಣ.

- ರಚನೆ : ೧೮-೨-೧೯೭೬

---

ಭಾವ : ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಬರೆದ ವೇದ ಸಂಪುಟಗಳನ್ನು ಓದಿ ಪ್ರತಿಕ್ರಿಯೆ ರೂಪಗೊಂಡ ಕವನ. ಪಾಶ್ಚಿಮಾತ್ಯರ ವೇದಾಭ್ಯಾಸದ ದೃಷ್ಟಿ ಬೇಂದ್ರೆಯವರಿಗೆ ರೊಚ್ಚಿಗೆಬ್ಬಿಸಿದಂತೆ ಇದೆ ಈ ಕವನ. ವೇದದ ತಿಳುವಳಿಕೆಯು ಬಾಳಿನ ಶೃಂಗಾರ. ಇದನ್ನು ತಿಳಿಸಿಕೊಡಲು ಭಾರತೀಯ ಪಂಡಿತರು ದಾದಿಯಂತೆ ಆರೈಕೆ ಮಾಡುತ್ತಾ ಪಾಶ್ಚಿಮಾತ್ಯರ ದಾಳಿಯಿಂದ ವೇದಜ್ಞಾನ ರಕ್ಷಿಸಬೇಕು ಎಂಬ ಸೂಚನೆ ಇದೆ.

ಶಬ್ದಾರ್ಥ : ಹೀಟ=Heat=ಅಗೋಚರವಾದ ಶಕ್ತಿ.

ವಿಶೇಷ : ಈ ಕವನದ ಹಸ್ತಪ್ರತಿ ಪ್ರೊ. ನಾರಾಯಣಾಚಾರ್ಯರ ಗ್ರಂಥದ ಹೊರಹೊದಿಕೆಯ ಮೇಲಿದೆ.

# ೩೯ ನಂದು ಅಂಬೋದು ನಿಂದಲ್ಲ

ನಂದು ಅಂಬೋ ದೇಹ ನಿಂದಲ್ಲೊ ಪ್ರಾಣ
ಕೊಂದು ಕೂಗೇನಂತಿ ಹಾಕಿ ಆಣೆ
ನಿಂದು ನಿಂದು
ನಂದು ನಂದು! ಅಂತೀ
ಎಲ್ಲಿಂದ ಕಟ್ಗೊಂಡು ಬಂದಿ?

---

ಭಾವ : ಭೇದ ಭಾವ, ಅಭೇದ ಅರಿತಾಗ ರಸರುಚಿ ಒಂದಾದೀತು.



# ೪೦ ತಂತ್ರಾ-ಯಂತ್ರಾ

೧
ಮಾತಾಡೋ ಅವರಿಗೆ ಸುಮ್ಮನಿರ್ರಿ ಅಂತಾರ
ಸುಮ್ಮನಿದ್ದವರಿಗೆ ಮಾತಾಡ್ರಿ ಅಂತಾರ.
೨
ಆತು ಮಾತಾಡಿದ್ರ
ಕೇಳೋ ಅವರ ಇಲ್ಲಾ!
೩
ತನ್ನ ಮಾತು ಯಾರೂ ಕೇಳಲೊಲ್ಲರೋ
ಇದೇ ಎಲ್ಲಾರ ಗೋಳು.
೪
ನಮ್ಮ ಮಾತು ನಾವs ಕೇಳಬೇಕು
ಬೇರೆ ಗತಿ ಇಲ್ಲಾ.
೫
ವ್ಯಾಸನ ಸುತ್ತಿ ದಾಸನಿಗೆ ಬರ್ರಿ
ದಾಸನ ಸುತ್ತಿ ವ್ಯಾಸನಿಗೆ ಬರ್ರಿ
ಬೇರೆ ಕಥಿ ಇಲ್ಲಾ.
೬
ಒಳಗಿನ ಕಿವೀಗೆ ಕೇಳಿಸಿದ್ದs ಮಂತ್ರಾ
ಹಾಂಗ ನಡಸೋದs ತಂತ್ರಾ
ಹಾಂಗ ನಡೆಯೋದs ಯಂತ್ರಾ.

- ರಚನೆ : ಪುಲ್ಸೆ, ೧೯೬೮

---

ಭಾವ : ಅಂತರಂಗದ ನುಡಿ, ಬಹಿರಂಗದ ನಡೆ ಇವುಗಳ ಸಾಮರಸ್ಯವೇ ಬಾಳು.

# ೪೧ ಎಲವು - ಸಂಸ್ಕೃತಿ

೧

ಎಲವು ಏನು ಹೇಳ್ಯಾವು ? ಪಾಪ !
ಎಲ ಎಲವೊ, ಎಲಬು ಬುರುಡೆ
ಡೊಣ್ಣೆ ಇದ್ದ ಕಡೆಗೆ ಕಣ್ಣಿದ್ದವಣ್ಣಾ
ಮಿದುಳಿರದ ತಲೆಯು ಕುರುಡೆ

೨

ಹೃದಯವಿರದ ಎದೆ ಇದ್ದು ಏನು?
ಕೊನರರಿಯದಂಥ ಕೊರಡೆ
ಅರವು ಅರಿತವರದೊಂದು ನಾಡಿ
[ನರನಲ್ಲಿ ಇತ್ತು ಬಾಡಿ]

೩

ಸಂಸ್ಕೃತಿ ಶೇಷನ ಸಹಸ್ರ ಹಣೆಗಳು
ಹೊತ್ತಿವೆ ಉದ್ಭವ ಭಾಗ್ಯ
ಯೋಗನಿದ್ರೆ ಆರೋಗ್ಯವಲ್ಲ ಬಿಡು
ಅಪಕ್ವವಾ ವೈರಾಗ್ಯ.

---

ಭಾವ : ಸಂಸ್ಕೃತಿ ಎಂಬುದು ಪಾಕಸಿದ್ಧಿಯೇ ಹೊರತು ಅಪಕ್ವಸ್ಥಿತಿಯಲ್ಲ

ವಿಶೇಷ : ಈ ಕವನದ ಹಸ್ತ ಪ್ರತಿ The Transformation of Man-Lewis Mumford - ಪುಸ್ತಕದಲ್ಲಿದೆ.





## ೪೨ ಕರಿಯನೋ ಗಂಡಾ !

ಕರಿಯನೋ ಗಂಡಾ ! ಹತ್ತಿರ ಕರಿಯನೋ ॥ ಪಲ್ಲವಿ ॥
ಸುತ್ತೆಲ್ಲಾ ನೋಡಿಯೂ ಕತ್ತಲಿ ಕರಿ ಕಾಳಾ ॥ ಅನುಪಲ್ಲವಿ ॥
೧
ಅಪ್ಪಿ ಕೊಂಡ್ಹಾಂಗದ ಸಿಪ್ಪಿನsa ಸಿಹಿ ಮಾವು
[ಚಪ್ಪರಿಸಿ ತಿಂದರೇನು ? ಬೆಲ್ಲವಲ್ಲಾ ಬೇವು]
೨
ಜಪ್ಪಿಸಿ ನಾ ಕೂತರೂ । ತಪ್ಪಿಸಿಯೇ ಹೋದರು
ಹಾಲು ಬತ್ತಿ ಹೋದ ಗೋವು । ಕರೆಕರೆದಿತು ಈ ಕರು.
೩
ಒಡೆದ ಚಂದ್ರಮನೆ ಅವನು, ಚಿಕ್ಕ ಆಗಿ ಹೋದನೋ
ಬೆಂಕಿ ಬೆಂಕಿ ಕಾರಿ ಅವನು, ಬೆಳುದಿಂಗಳ ಕಳೆದನೋ.

---

ಭಾವ : ವಿರಹದ ಒಂದು ಬಗೆ.

ವಿಶೇಷ : ಇದೊಂದು ನಾಟ್ಯಗೀತ. ನಾಟಕಕ್ಕಾಗಿ ಬರೆದದ್ದು, ನಾಟಕ ಬರೆಯಲಿಲ್ಲ.

# ೪೩ ಯಾಕS ಅಂದರೆ ಯಾಕS?

ಯಾಕS ಅಂದರ ಯಾಕS ? ನೀ ಕೇಳಾಕS ನಾ ಹೇಳಾಕ
ನೀವು ಅಂದದ್ದು ತಪ್ಪು ಅಂತ ನೀವು ಒಪ್ಪಿಕೊಳ್ರಿ ;
ನೀವು ಅಂದದ್ದು ಬರೋಬ್ಬರಿ. ನಾನೂ ಒಪ್ಪಕೋತೇನಿ.
೨
ಹುಬ್ಬು ಗಂಟುಹಾಕಿ, ಏನು ಲೆಕ್ಕ ಹಾಕಿ
ನಿಮ್ಮಗಂಟು ಏನು ಹೋಯಿತು ?
ಅದೇ ನೋಡು ಕಿಸೇದಾಗ, ಕೈಹಾಕಿ
೩
ಗೋಮಾ ತಿಂದು ಗೋಮೂತ್ರ ಮುಕ್ಕಳಿಸಿದರು ಆಚಾರ್ರು !
ಅದ್ಯಾಕ ?
ಏನೋ ಸೆಗಣಿ ತಿಂದರೂ ಅನಿಸಿತು. ಪಾಪ ! ಅದಕ್ಕS
ಪ್ರಾಯಶ್ಚಿತ್ತ ಅಂತ..........
೪
ಇದಂತೂ ಬರೇ ಸೆಗಣೇನS ಆತಲ್ಲಿ ?
ಒಳ್ಳೆಯವರು ಕಾಣ್ತೇರಿ, ಗೋಮಯಕ್ಕ ಸಿಕ್ಕ್ಯಾಂಗ ಅಂದ್ರ ಯಾರರೇ,
ಬಾಯಾಗ ಸೆಗಣೀ ಹಾಕ್ಯಾರು !
೫
ಇರಲಿ, ಇಂಥಾ ಒಳ್ಳೆ ಕೆಲಸ ಮಾಡಿದವ್ರು ಕೆಟ್ಟ ಏನೋ
ತಿಂದಾವರ ಹಾಂಗ, ಬಾಯಿ ಯಾಕ ತೊಳಕೊಂಡರು ?
೬
ಬೂದಿಹಚ್ಚಿದ ಮ್ಯಾಲೆ ನೀರ ಹಾಕಿ ತೊಳಿಯೂದಿಲ್ಲS
ದೇವರ ಉಪಕರಣೆಕೂಡ?
೭
ಗೋಮದಲೇ ಶುದ್ಧ ಆಗಿತ್ತಲ್ಲಾ ಬಾಯಿ?
ಹೌದು ಯಾರಿಲ್ಲಾ ಅಂತಾರ.

೮
ಶುದ್ಧ ಸ್ನಾನದಲೇ ಶುದ್ಧ ಆದರೂ
ಮಡೀ ಉಡೋದು ಅಂತ ಮ್ಯಾಲೆ ಬ್ಯಾರೆ ಇರೂದಿಲ್ಲೇನು?
೯
ಛೇ ಛೇ, ಸಾಲಿ ಕಲ್ತು ನಮ್ಮ ತಲೀನ ಹೊಲಸು ಆಗ್ಯಾವ
ಈ ಮಲಮೂತ್ರ ಶುದ್ಧೀಶಾಸ್ತ್ರ ನಮ್ಮ ತಲೀಗೆ
ತೂಗೋ ವಸ್ತು ಅಲ್ಲ.

---

ಭಾವ : ಗೊಡ್ಡು ಸಂಪ್ರದಾಯವನ್ನು ಕುರಿತು ವಿಡಂಬನೆ.

ಶಬ್ದಾರ್ಥ : ಗೋಮಯ=ಸಗಣಿ ನೀರಿನಿಂದ ಊಟ ಮಾಡಿದ ಸ್ಥಳವನ್ನು ಶುದ್ಧಗೊಳಿಸುವುದು.



## ೪೪ ಗೋಂದಾಜಿ ನಾಯಕನ ಲಾವಣಿ

೧
ಅರ್ಜಿ ಕೇಳಿಕೊಂಡು ಮರ್ಜಿಯಾಗಬೇಕು
ಮಹಾರಾಜರೂ ಪ್ರಜಾಜನಾ!
ಗೋಂದಾಜಿ ನಾಯಕನ ಹಾಡಿನ ನುಡಿನುಡಿ
ಶ್ರುತೀಗೆ ಖಡ್ಗದ ಖಣಾಖಣಾ.
೨
ಸಜ್ಜಾಗಿ ಸ್ವಾತಂತ್ರ್ಯ ಭಂಗಾರಕ್ಕ
ಹೊಸ ಹೊಸ ಸಡಗರ ಸಿಂಗಾರಕ್ಕ
ಮಂಗಲ ಕಾಲಾ ಈಗ ಬಂದದ
ಇಂದ ಬಂದದ ನಮ್ಮ ಬಾಗಿಲಕ್ಕ.
೩
ಶಾಂತಾ ನಮ್ಮ ದೇವಿ, ದುರ್ಗಾ ಆಗ್ಯಾಳ.
ಆಗಿ ದೀನ ದುಃಖಿತರ ಧ್ವನಿ ಸ್ವರುಪಾ
ಎದ್ದಿಯಾ ನನ್ನ ತಮ್ಮ; ನಿದ್ದೀ ಮಾಡಬ್ಯಾಡಾ
ಗೆದ್ದs ಬರಬೇಕು ನಾವು ಇದೆ ವರುಷಾ.
ಹೊಟ್ಟೀ ಬಟ್ಟೀ ಹ್ವಾರೆ ಬಿಟ್ಟುಕೊಟ್ಟು ನಾ
ಬಂದೇನಿ ಹಿಂತಾಂವಾ ಆಗಿ ಹರುಷಾ

೪
ಯುಗ ಯುಗ ಕೇಳಿರಿ, ಸತ್ಯ ಅಂತ ಹೇಳಿರಿ
ಪುರುಷಾರ್ಥ, ಪುರಾಣ ಒಣಾ ಒಣಾ.
ಕಣ್ಣೀರಿನ್ಯಾಗ ತೊಯ್ದು ಸಣ್ಣ ಸುಖದ ಒಣಾ ತುಕಡಿ
ತಿಂತನs ತಾಳೀರಿ ಎಷ್ಟು ದಿನಾ ?
ಸತ್ತ್ಹಾಂಗ ಬಾಳೀರಿ ಹ್ಯಾಂಗ ಜನಾ ?

---

ಭಾವ : ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕರೂ ಬಡವರು ಒಣಾತುಕಡಿ ಕಣ್ಣೀರಿನಲ್ಲಿ ಅದ್ದಿ ತಿನ್ನುವುದು ತಪ್ಪಿಲ್ಲ ಎಂಬ ಎಚ್ಚರ ಕೊಡುವ ಹಾಡು.



## ೪೫ ಏಕೋದತ್ತ

೧
ಏಕೋದತ್ತನ ಅನಂತ ಮೂರುತಿ
ಮರಮರದಲಿ ಮೂಡಿವೆ ॥ ಎಲ್ಲಾ ॥
ಬ್ರಹ್ಮಾಂಡವ ಕೂಡಿವೆ !

೨
ಮರದ ಮರೆವಿನಲಿ, ಅತ್ತಿಯ ಹೂವೂ
ಒಳಮುಚ್ಚಿದೆ ಕಣ್ಣಿಗೇ ॥ ಗುರುವೇ ॥
ಒಳಮುಚ್ಚಿದೆ ಕಣ್ಣಿಗೇ !

೩
ಹತ್ತಿಯ ಬತ್ತಿಯ ಹೊಸೆಯಲೆಂತು ನಾ
ಆ ಪ್ರಣತಿಯ ಎಣ್ಣೆಗೇ ॥ ಗುರುವೇ ॥
ಆ ಪ್ರಣತಿಯ ಎಣ್ಣೆಗೇ !

೪
ಆಲದ ಹಾಲಿನ ಕಾಲುವೆ ಹರಿದರು
ತೊಟಕು ನನ್ನ ಪಾಲಿಗೇ ॥ ಗುರುವೇ ॥
ತೊಟಕು ನನ್ನ ಪಾಲಿಗೇ !





೫

ಹಂಚಲೆಂತು ನಾ ಪ್ರಪಂಚ ಪಂಕ್ತಿಗೆ
ಸಾವಿರದ ಸಾಲಿಗೇ ॥ ಗುರುವೇ ॥
ಸಾವಿರದ ಸಾಲಿಗೇ !

೬

ಅರಳಿ ಅರಳಿ ಸುತ್ತರಳಿ ನಿಂತರೂ
ನಮ್ಮ ನಿಮ್ಮ ಕರುಳಿಗೇ ॥ ಗುರುವೇ ॥
ನಮ್ಮ ನಿಮ್ಮ ಕರುಳಿಗೇ !

೭

ಹರಳಿನುಂಗುರವ ತೊಡಿಸದಿದ್ದರೇ
ಮುದ್ರೆಯಂತು ಬೆರಳಿಗೇ ? ॥ ಗುರುವೇ ॥
ಮುದ್ರೆಯಂತು ಬೆರಳಿಗೇ !

೮

'ಓಂ ಭವತಿ' ಬೇಡುತ್ತ ಬಂದಿರಿ
ನೀವೇ ಬಾಗಿಲ ಬಳೀ ! ॥ ಗುರುವೇ ॥
ನೀವೇ ಬಾಗಿಲ ಬಳೀ !



೯

ಅನುಸ್ಯೂತ ಇದು ಅನೂಚಾನ
ಆಗಿರಲಿ ದತ್ತನಾ ಎಳೀ ॥ ಗುರುವೇ ॥
ಆಗಿರಲಿ ದತ್ತನಾ ಎಳೀ !

- ರಚನೆ : ೨೭-೬-೧೯೬೬

---

ಭಾವ : ಬೇಂದ್ರೆಯವರ ಕನಸಿನಲ್ಲಿ ಅವರ ಆತ್ಮಸ್ಥ ಗುರು ಬಾಗಿಲಿಗೆ ಬಂದು 'ಓಂ ಭವತಿ' ಎಂಬ ಮಂತ್ರವನ್ನು ಉಸುರಿದನು. ಅತ್ತಿ ಆಲ ಹಾಗೂ ಅರಳಿ ವೃಕ್ಷದ ಸಸಿಗಳ ಸಾನ್ನಿಧ್ಯವಿತ್ತು. ಆ ಎಲ್ಲ ಮರಗಳು ಉದ್ಭವವಾಗಿ ಬೆಳೆದು ಬೇಂದ್ರೆಯವರ ಉದ್ಭವಕಾವ್ಯದ ನೆಲೆಯನ್ನು ಸೃಷ್ಟಿಸಿವೆ. ಗುರು ಅಂಬಿಕಾತನಯದತ್ತ; ಶಿಷ್ಯ-ದ.ರಾ. ಬೇಂದ್ರೆ. ಇದಕ್ಕೆ ಅಧಿಷ್ಠಾನ ಶ್ರೀ ಸದ್ಗುರು-ದತ್ತಾತ್ರೇಯ. ಶ್ರೀ ದತ್ತನ ಬೋಧವು ಅಖಂಡವಾಗಿ ಅಂಬಿಕಾತನಯದತ್ತನ ಮುಖಾಂತರ ದ.ರಾ. ಬೇಂದ್ರೆಯವರಿಗೆ ಒಸೆದು ತಲುಪಿತು ಎಂಬ ಧನ್ಯತೆಯ ಭಾವ ಹಾಗೂ ನಮ್ರತೆಯ ಭಾವ ಇಲ್ಲಿದೆ.

ಶಬ್ದಾರ್ಥ : ಅನುಸ್ಯೂತ=ಅಖಂಡ, ಕಟ್ಟಲ್ಪಟ್ಟ, ವ್ಯಾಪಿಸುವ. ಅನೂಚಾನ=ವಿದ್ವಾನ್, ಸಾಮವೇದಾಧ್ಯಯನ ಮಾಡಿದ, ನಮ್ರ.

ವಿಶೇಷ : ಸ್ವಾಯಂಭುವ ಮನ್ವಂತರದಲ್ಲಿ ಅತ್ರಿ ಮಹರ್ಷಿಯ ಪತ್ನಿಯಾದ ಅನಸೂಯೆಯಲ್ಲಿ ಜನಿಸಿದ ಮೂವರು ಪುತ್ರರಲ್ಲಿ ಒಬ್ಬ ದತ್ತ. ಈತನು ಸ್ವಾರೋಚಿ ಮನ್ವಂತರ ಸಪ್ತರ್ಷಿಗಳಲ್ಲಿ ಒಬ್ಬ. ನಿಮಿ ಋಷಿ ಈತನ ಮಗ. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅತ್ರಿಮುನಿ ಸಂತಾನಾರ್ಥವಾಗಿ ತಪಸ್ಸು ಮಾಡಲಾಗಿ, ಪ್ರಸನ್ನರಾಗಿ ಮೈದೋರಿದ ತ್ರಿಮೂರ್ತಿಗಳು ತಮ್ಮ ಒಬ್ಬೊಬ್ಬರ ಅಂಶದಿಂದಲೂ ಒಬ್ಬೊಬ್ಬ ಮಗ ಹುಟ್ಟುವನೆಂದು ಅನುಗ್ರಹಿಸಿದರು. ಅಂತೆಯೇ ಬ್ರಹ್ಮನ ಅಂಶದಿಂದ ಚಂದ್ರನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ [ದ.ರಾ.ಬೇಂದ್ರೆ ಕೊನೆಯ ಅವಸ್ಥೆ ವಿಷ್ಣು ಸಹಸ್ರನಾಮ ಚಿಂತನ], ಶಿವನ ಅಂಶದಿಂದ ದುರ್ವಾಸ ಮುನಿಯೂ ಜನಿಸಿದರು. ದತ್ತಾತ್ರೇಯ ಬ್ರಹ್ಮಚರ್ಯನಿರತನಾಗಿದ್ದು-ಅಲರ್ಕ, ಪ್ರಹ್ಲಾದ, ಯದು, ಕಾರ್ತವೀರ್ಯ ಮುಂತಾದವರಿಗೆ ಜ್ಞಾನೋಪದೇಶ ಮಾಡಿದನು.

ರಾಕ್ಷಸರ ಹಾವಳಿಯನ್ನು ತಡೆಯಲಾರದೆ ದೇವತೆಗಳು ದತ್ತಾತ್ರೇಯರಲ್ಲಿ ಮೊರೆಯಿಟ್ಟರು. ದತ್ತಾತ್ರೇಯನು ಅವರನ್ನೆಲ್ಲ ತನ್ನ ಆಶ್ರಮದ ಬಳಿಗೆ ಬರಮಾಡಿಕೊಂಡನು. ರಕ್ಕಸರು ಹೊಂಚು ಹಾಕಿಕೊಂಡಿದ್ದು ದತ್ತಾತ್ರೇಯನ ಆಶ್ರಮದಲ್ಲಿದ್ದ ಲಕ್ಷ್ಮಿಯನ್ನು ಅಪಹರಿಸಿಕೊಂಡು ಹೋಗುತ್ತಿರುವಾಗ ದತ್ತಾತ್ರೇಯನ ತಪೋಮಹಿಮೆಯಿಂದ ಎಲ್ಲ ರಾಕ್ಷಸರು ತಮ್ಮಷ್ಟಕ್ಕೆ ತಾವು ಸತ್ತು ಬಿದ್ದರು.

[ದತ್ತಾತ್ರೇಯ ಮಹಿಮೆಯ ಎಲ್ಲ ಕಥಾನಕಗಳೂ ದ.ರಾ.ಬೇಂದ್ರೆಯವರಿಗೆ ಸತತವಾಗಿ, ವಿವಿಧ ರೀತಿಯ ಪ್ರೇರಣೆ ಕೊಡುತ್ತಿದ್ದವು. ಅಂಥವುಗಳಲ್ಲಿ ಉದ್ಭವ ಪ್ರೇರಿತ ಕವನ-ಏಕೋದತ್ತ].





# ಡಾ|| ದ. ರಾ. ಬೇಂದ್ರೆಯವರ ಜೀವನ ಕಥೆಯ ಹಂದರ

## ಜನನ-ವಿವಾಹ

೩೧-೧-೧೮೯೬ : ಮಾಘವದ್ಯ ಪ್ರತಿಪದಾ-ಗುರುಪ್ರ...ಪದಾ, ಮನ್ಮಥನಾಮ ಸಂವತ್ಸರ-ಧಾರವಾಡ, ಪೋತನೀಸ ಓಣಿಯಲ್ಲಿ ಜನನ.

೧೮೯೯ : ನೀರಕುತ್ತು ದಾಟಿತು. ಜೇಷ್ಠವೋ ಶ್ರಾವಣವೊ ಇರಬೇಕು. ಹಾಲಗೇರಿ ಕೆರೆಯಲ್ಲಿ ಬಿದ್ದು ಜೀವಂತ ಪಾರಾದದ್ದು.

೧೯೦೭ : ತಂದೆ-ರಾಮಚಂದ್ರ ತೀರಿಕೊಂಡರು.

೧೯೦೨-೧೯೧೩ : ಧಾರವಾಡದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಮ್ಯಾಟ್ರಿಕ್ ಪಾಸಾಗುವವರೆಗೆ.

೧೯೧೩ : ಅಜ್ಜಿ-ತಾಯಿಯ ತಾಯಿ. ಗೋದುಬಾಯಿ ತೀರಿಕೊಂಡರು,

೧೯೧೪ : ಪುಣೆಯ ಫರ್ಗ್ಯುಸನ್ ಕಾಲೇಜು ಸೇರಿದ್ದು.

೧೯೧೬-೧೭ : ವಿವಿಧ ಛಂದಸ್ಸುಗಳಲ್ಲಿ, ಕನ್ನಡ, ಮರಾಠಿ, ಇಂಗ್ಲೀಷ್ ಹಾಗೂ ಸಂಸ್ಕೃತದಲ್ಲಿ ಕವಿತಾ ರಚನೆ ಹಾಗೂ ಶ್ರೇಷ್ಠ ಕವಿಗಳ ಕವನಗಳ ಅನುವಾದ.

೧೯೧೮ : ಬಿ. ಎ. ಪದವಿ. ಜೂನ್ ೪ರಂದು. ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕ. (ಈಗಿನ ವಿದ್ಯಾರಣ್ಯ ಹೈಸ್ಕೂಲು)

೧೯೧೯ : ಲಕ್ಷ್ಮೀಬಾಯಿ ಅವರೊಂದಿಗೆ ಹುಬ್ಬಳ್ಳಿಯಲ್ಲಿ ವಿವಾಹ. 'ವಾಗ್ಭೂಷಣ' ಸಂಪಾದಕ ವರ್ಗದಲ್ಲಿ ಸೇರ್ಪಡೆ.

## ಸಂತತಿ

೧. : ಕ್ಷೇಮೇಂದ್ರ (ಜನನ : ೧೯೨೨ ಧಾರವಾಡ; ಮರಣ ; ೧೯೨೩)
'ಮೊದಲಿನ ಫಲವೊಂದು ಮೀಸಲು ಮಣ್ಣಿಗೆ.'

೨. : ರಾಮು (ಜನನ ೧೯೨೪ ಹಾನಗಲ್ಲ : ಮರಣ ೧೯೪೪)
'ಹುಸಿನಗುವ ಕೂಸಿನ ಹೊಸ ಹೊಸ ಆಟಿಕೆ.'

೩. : ಭಾಸ್ಕರ (ಜನನ ೧೯೨೭ ಧಾರವಾಡ ; ಮರಣ ೧೯೨೭)
'ಭೆಟ್ಟಿಗೆ ಬಂದನು ಹೊಸದೊಬ್ಬ ಕಂದನು ಅಥಿತಿಯೋ ಎಂಬಂತೆ.'

೪. : ಪಾಂಡುರಂಗ (ಜನನ:೧೯೨೮, ಧಾರವಾಡ ಮರಣ : ೧೮-೧೧-೨೦೦೩)
'ಹುಡುಗನ ಒಡನಾಟವು ಹುಡುಗಾಟ ಮಾಡಿದವು.'

೫. : ಲಲಿತಾ (೧೯೩೪, ಧಾರವಾಡ; ಮರಣ ೧೯೩೪)
'ಆ ಕೂಸ ಕಳಕೊಂಡು ನೀನೆಂತೊ ಉಳಕೊಂಡು
ಲಾಲಿತ್ಯವಿಲ್ಲದ ಶೈಲಿಯೊಲು.'
('ನೀ ಹಿಂಗ ನೋಡಬ್ಯಾಡ ನನ್ನ' ಕವನದ ವಸ್ತು)

೬. : ವಾಮನ (ಜನನ : ೧೯೩೫, ರಾಣೆಬೆನ್ನೂರು)

೭. : ಪ್ರೇಮಾ (ಜನನ : ೧೯೩೭, ಧಾರವಾಡ; ಮರಣ : ೧೯೩೭)

೮. : ಮಂಗಲಾ (ಜನನ : ೧೯೩೯, ಧಾರವಾಡ)

೯. : ಆನಂದ (ಜನನ : ೧೯೪೩, ಧಾರವಾಡ; ಮರಣ : ೧೯೪೪)

ಇತರ

೧೯೨೨ : ದಾವಣಗೇರಿಗೆ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.

೧೯೨೨ : ''ಕೃಷ್ಣಾಕುಮಾರಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೨೩ : ವಿಜಾಪೂರದ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.
'ಜಯ ಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ, ಮಧುರಚೆನ್ನರ ಭೆಟ್ಟಿ.

೧೯೨೪ : ತಾಯಿ-ಪಾರ್ವತಿ-ಅಂಬಿಕೆ ತೀರಿಕೊಂಡದ್ದು
'ತಾಯಿ ಗಿಡವು ಮಾಯವಾಯಿತಲೇ!'
– 'ಜೇನುಹುಟ್ಟು' ಕೈ ಬರಹ ಪತ್ರಿಕೆ ಎಳೆಗೆಳೆಯರಾದ ವಿದ್ಯಾರ್ಥಿಗಳ ಮೂಲಕ ಹೊರಡಿಸಿದ್ದು.

೧೯೨೬ : 'ಸ್ವಧರ್ಮ' ಪತ್ರಿಕೆಯ ಸಂಪಾದಕರು.
- ಗೆಳೆಯರ ಗುಂಪಿನಿಂದ ನಾಡ ಹಬ್ಬ ಪ್ರಾರಂಭ.

೧೯೨೮ : 'ನನ್ನದು ಈ ಕನ್ನಡ ನಾಡು' ಕವನ ಸಂಗ್ರಹದ ಸಂಪಾದಕರು.

೧೯೨೯ : I) ಕಕ್ಕ ಬಂಡೋಪಂತ ಬೇಂದ್ರೆಯವರು ದ. ರಾ. ಬೇಂದ್ರೆಯವರಿ
೫-೧೧-೧೯೨೯ ರಂದು ವಾಸಕ್ಕಾಗಿ ಸಾಧನಕೇರಿಯಲ್ಲಿ ಒಂದ
ಮನೆಯನ್ನು ಕಾಣಿಕೆಯಾಗಿ ಕೊಡಿಸಿದ್ದು.
೧೩, ಶ್ರೀಮಾತಾ, ಸಾಧನಕೇರಿ, ಧಾರವಾಡ – ನಿವಾಸ.
'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು ಮಮತೆಯ
ಕುರುಹಾಗಿ ತಾ ದೊರಕಿತು.'
II) ಬೆಳಗಾವಿಯ ಸಮ್ಮೇಳನದಲ್ಲಿ –
'ಹಕ್ಕಿ ಹಾರುತಿದೆ ನೋಡಿದಿರಾ' ಕವನ ವಾಚನ.
III) ೧೧-೧೧-೧೯೨೯ ರಂದು ಶ್ರೀ ಆಲೂರ್ ವೆಂಕಟರಾವ್ ಇವರಿಂ
'ಜಯ ಕರ್ನಾಟಕ' ಕೊಂಡದ್ದು.
ಸಂಪಾದಕರಾಗಿ ಕಾರ್ಯ ನಿರ್ವಹಣೆ.
''ಜಯ ಕರ್ನಾಟಕವೆನ್ನುತ ಗೆಳೆಯರ ಕನ್ನಡದಾಸೆಯು ಗುಡಿಕಟ್ಟಿತು.''
'ನರಬಲಿ' – ಕವನವು ಬಲಿಮಾಡಿತೆನ್ನನು,
ಹೆಳವನಿದ್ದಲ್ಲಿಗೆ ಹೊಳೆ ಬಂದಿತು.''

೧೯೩೦ : 'ಹಕ್ಕಿ ಹಾರುತಿದೆ' ಕವನ ಸಂಗ್ರಹದ ಸಂಪಾದಕರು.

೧೯೩೨ : ಹಿಂಡಲಗಿ ಜೇಲುವಾಸ. ಮುಗದ ಎಂಬ ಹಳ್ಳಿಯಲ್ಲಿ ದಿಗ್‌ಬಂಧನವಾಸ.
''ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಗಿ,
ಮುಗದದ ಮಳೆಗಾಗಿ ಮುಂದೆಳೆದಿತು.''

೧೯೩೨ : ''ಗರಿ'' ಮೊದಲನೆಯ ಆವೃತ್ತಿಯು ಹೊರ ಬಂದದ್ದು.

೧೫-೮-೧೯೩೩ : 'ಜಯ ಕರ್ನಾಟಕ' ಸಂಬಂಧ ಮುಕ್ತಾಯ.
ಗೆಳೆಯರ ಗುಂಪಿನ ಸ್ಫೋಟ, ವಿಘಟನೆ.

೧೯೩೩ : ಎಂ. ಎ. ಅಭ್ಯಾಸಕ್ಕಾಗಿ ಪುಣೆಗೆ ಪ್ರಯಾಣ.
'ಪ್ರ[illegible]ಯಲ್ಲಿ ಕಳೆದಂಥ ಅಜ್ಞಾತವಾಸವ ನೆನೆದರೆ ಮೈಯೆಲ್ಲ ಜುಮ್ಮೆನ್ನುತ್ತ'

೧೯೩೪ : "ಮೂರ್ತಿ" ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೩೪ : "ಕಾಮಕಸ್ತೂರಿ" ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೩೫ : ಎಂ. ಎ. ಪದವಿ ಪಡೆದದ್ದು
ಮುಂಬೈಯಲ್ಲಿ ಸಾಹಿತ್ಯ ಸಮ್ಮೇಳನದ ಕವಿ ಸಮ್ಮೇಳನಕ್ಕೆ ಅಧ್ಯಕ್ಷ

೧೯೩೫-೪೦ : ಡಾ|| ಮಾಸ್ತಿಯವರ ಸಹಾಯ ಹಸ್ತ ಲಭಿಸಿದ್ದು.
"ದೈವದ ಕೃಪೆಯೆಂದು ಅದ ತಿಳಿದೆನು."

೧೯೩೬ : ವಿಜಯನಗರ ಷಟ್ ಶತಸಾಂವತ್ಸರಿಕ ಉತ್ಸವದ ಕೆಲಸಕ್ಕಾಗಿ
ಹೈದರಾಬಾದ ಪ್ರವಾಸ.

೧೯೩೭ : 'ಸಖೀಗೀತ'ದ ಮೊದಲನೆಯ ಆವೃತಿ ಪ್ರಕಟಗೊಂಡದ್ದು.

೧೯೩೮ : ನಾದಲೀಲೆ, ಉಯ್ಯಾಲೆ, ಪ್ರಕಟಗೊಂಡದ್ದು
"ಜೀವನ" ಪತ್ರಿಕೆಯ ಸಂಪಾದಕ ಆದದ್ದು.

೧೯೩೯ : "ನಿರಾಭರಣ ಸುಂದರಿ," ಹಾಗೂ "ಸಾಹಿತ್ಯ ಮತ್ತು ಸಂಶೋಧನೆ,"
ಕೃತಿಗಳು ಪ್ರಕಟಗೊಂಡದ್ದು.

೧೯೪೦ : ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ.

೧೯೪೧ : ಗದಗ-ವಿದ್ಯಾದಾನ ಸಮಿತಿ ಹೈಸ್ಕೂಲಿಗೆ-ಹೆಡ್ ಮಾಸ್ತರ ಆಗಿ ಹೋದದ್ದು.

೧೯೪೨ : ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ಶಿಕ್ಷಕ.

೧೯೪೩ : ಫೆಬ್ರುವರಿಯಲ್ಲಿ ಪಾಂಡಿಚೇರಿ-ಶ್ರೀಮಾತಾರವಿಂದರ ದರ್ಶನ.
- ಪೂನಾ ಬಿ. ಎಂ. ಸಿ. ಸಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ,
"ಮೇಘದೂತ" ಪ್ರಕಟಗೊಂಡದ್ದು.

೧೯೪೪ : ಸೊಲ್ಲಾಪುರದ ಡಿ. ಏ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ ಆದದ್ದು.

೧೯೪೪ : ರಾಮ ಹಾಗೂ ಆನಂದ ತೀರಿಕೊಂಡದ್ದು ಸೊಲ್ಲಾಪುರದಲ್ಲಿ.

೧೯೪೫ : ಸೊಲ್ಲಾಪುರ ನೀಲಾನಗರದಲ್ಲಿ ವಾಸ ಪ್ರಾರಂಭ.

೧೯೪೬ : ಗೆಳೆಯರಿಂದ ಸನ್ಮಾನ. ೫೦ನೆಯ ಹುಟ್ಟುಹಬ್ಬ
"ಹಾಡು-ಪಾಡು" ಪ್ರಕಟಗೊಂಡದ್ದು.

೧೯೪೭ : ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದು.

೧೯೪೮ : ಗಾಂಧೀ ಮರಣ, ಜೆ.ಕೃಷ್ಣಮೂರ್ತಿ ಮತ್ತು
ಶ್ರೀ ಗುಳವಣಿ ಮಹಾರಾಜರ ದರ್ಶನ.

೧೯೫೦ : ಶ್ರೀಅರವಿಂದರ ನಿರ್ವಾಣ ; ಡಿಶೆಂಬರ-೫. ಹೆಂಡತಿಗೆ ವಿಷಮ ಜ್ವರ.

೧೯೫೧ : "ಗಂಗಾವತರಣ" ಪ್ರಕಟಗೊಂಡದ್ದು. ಸಂಖ್ಯಾಯೋಗ ವಿಚಾರ,
ಮರಾಠಿಯಲ್ಲಿ ವಿಪುಲವಾಗಿ ಬರವಣಿಗೆ.

೧೯೫೨ : ಪ್ರಭಾಕರ ಮಹಾರಾಜರ ದರ್ಶನ.

೧೯೫೩ : ಗೆಳೆಯ ಚೆನ್ನಮಲ್ಲಪ್ಪ-ಮಧುರಚೆನ್ನ-೧೫ ಆಗಸ್ಟರಂದು ಮರಣ.

೧೯೫೪ : ಶ್ರೀರಾಮದಾಸರ ದರ್ಶನ.

೧೯೫೫ : ದಿಲ್ಲಿಗೆ ಕವಿ ಸಮ್ಮೇಳನಕ್ಕಾಗಿ ಹೋದದ್ದು.

೧೯೫೬ : ೬೦ನೇ ಹುಟ್ಟುಹಬ್ಬ. ಧಾರವಾಡ ಆಕಾಶವಾಣಿ ಸಾಹಿತ್ಯ ಸಲಹಾಕಾರ,
ಮಗ-ಪಾಂಡುರಂಗನ ವಿವಾಹ,
ಡಾ|| ಕುವೆಂಪು ಅವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೭ : "ಅರಳು-ಮರಳು" ಪ್ರಕಟಗೊಂಡದ್ದು,
ಡಾ|| ರಂ. ಶ್ರೀಮುಗಳಿ ಯವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೮ : ಸಾಹಿತ್ಯ ಅಕಾಡೆಮಿ ಬಹುಮಾನ ಯಾರಿಗೂ ಸಿಗಲಿಲ್ಲ.

೧೯೫೮-೫೯ : "ಅರಳು-ಮರಳು" ಸಂಗ್ರಹಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ,
ಧರ್ಮಸ್ಥಳಕ್ಕೆ ಹೋದದ್ದು. 'ನಮನ', 'ಸಂಚಯ' ಪ್ರಕಟಗೊಂಡದ್ದು.

೧೯೬೦ : ಡಾ|| ಕಾರಂತರಿಗೆ ಬಹುಮಾನ.

೧೯೬೧ : ಡಾ|| ಗೋಕಾಕರಿಗೆ ಬಹುಮಾನ.

---

(ಇಲ್ಲಿಯವರೆಗಿನ ಜೀವನ ಘಟನಾವಳಿಗಳನ್ನು ದ.ರಾ.ಬೇಂದ್ರೆಯವರು ತಮ್ಮ ಆತ್ಮಚರಿತ್ರೆಗೆ ಅನುಬಂಧವಾಗಿ ಪ್ರಕಟಿಸಿದ್ದು "ನಡೆದು ಬಂದ ದಾರಿ" ಸಂ.೩ರಲ್ಲಿ. ಇದಕ್ಕೆ ಐತಿಹಾಸಿಕ ಮಹತ್ವವಿದೆ. ತಮ್ಮ ಸ್ನೇಹಿತರಿಗೆ ಸಿಕ್ಕ ಬಹುಮಾನ ಅಥವಾ ಅವರ ಜೀವನ ಘಟನೆಗಳು ತಮ್ಮ ಜೀವನದ ಪ್ರಮುಖ ಘಟನೆ ಎಂಬುದಾಗಿ ಬೇಂದ್ರೆ ಭಾವಿಸಿದ್ದು ಅನುಕರಣೀಯ. ಸಾಹಿತಿ-ಸಾಹಿತಿ-ಸ್ನೇಹ ಸಂಬಂಧವೇ ಸಂಸ್ಕೃತಿ.)

---

೧೯೬೨ : ತುಮಕೂರಿನ ಪೌರಸಭೆಯ ಸನ್ಮಾನ.

೧೯೬೪ : ಮೈಸೂರು ದಸರಾ ಮಹೋತ್ಸವ ಸನ್ಮಾನ.

೧೯೬೫ : ಮರಾಠಿ "ಸಂವಾದ" ಕೃತಿಗೆ ಕೇಳಕರ ಪ್ರಶಸ್ತಿ.

೧೯೬೬ : ಮೈಸೂರು ವಿಶ್ವವಿದ್ಯಾಲಯದಿಂದ "ಗೌರವ ಡಾಕ್ಟರೇಟ್,"
ಹೈದ್ರಾಬಾದಿನ ಹಿಂದೀ ಪ್ರಚಾರ ಸಭಾದ 'ಸಾಹಿತ್ಯ ಆಚಾರ್ಯ' ಪ್ರಶಸ್ತಿ
ಶಿರಹಟ್ಟಿಯಲ್ಲಿ ೭೦ನೇ ಹುಟ್ಟುಹಬ್ಬ,
ಮೈಸೂರು ಸರ್ಕಾರದ (ಕರ್ನಾಟಕ) ಆಜನ್ಮ ವಿಶ್ರಾಂತಿ ವೇತನ.
ಪತ್ನಿ ಶ್ರೀಮತಿ ಲಕ್ಷ್ಮೀಬಾಯಿಯವರ ನಿಧನ: ೧೭-೮-೧೯೬೬.

೧೯೬೮ : ದಿಲ್ಲಿಯಿಂದ 'ಪದ್ಮಶ್ರೀ' ಪ್ರಶಸ್ತಿ.
ಕರ್ನಾಟಕ ವಿಶ್ವವಿದ್ಯಾಲಯದಿಂದ "ಗೌರವ ಡಾಕ್ಟರೇಟ್."

೧೯೬೯ : ಕೇಂದ್ರ ಸಾಹಿತ್ಯ ಅಕಾಡೆಮಿಯ 'ಫೆಲೊಶಿಪ್'ಗೌರವ-ದಿಲ್ಲಿ.

೧೯೭೨ : ಪರ್ಯಾಯದಲ್ಲಿ ಉಡುಪಿ ಮಠದ ವತಿಯಿಂದ
'ಕರ್ನಾಟಕ ಕವಿ ಕುಲ ತಿಲಕ' ಬಿರುದು. ೭೫ನೇ ಹುಟ್ಟು ಹಬ್ಬದ
ಸವಿನೆನಪಿಗಾಗಿ ವರಕವಿ ಬೇಂದ್ರೆಯವರನ್ನು ಕುರಿತು ರಾಜ್ಯ ಸರ್ಕಾರದ
ಸಾಕ್ಷಿ ಚಿತ್ರ ನಿರ್ಮಾಣ.

೧೯೭೩-೭೪ : 'ನಾಕುತಂತಿ' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ಪ್ರದಾನ.

೧೯೭೬ : ವಾರಣಾಸಿ ಕಾಶೀ ವಿದ್ಯಾಪೀಠದಿಂದ "ಗೌರವ ಡಾಕ್ಟರೇಟ್"

೨೬-೧೦-೮೧ : ನಿರ್ವಾಣ - ಮುಂಬೈಯ ಹರಿಕಿಸನ್‌ದಾಸ ಆಸ್ಪತ್ರೆಯಲ್ಲಿ.
"ನಾವು ಬರತೇವಿನ್ನ ನೆನಪಿರಲಿ ತಾಯಿ, ನಂ ನಮಸ್ಕಾರ ನಿಮಗ"



# ಡಾ.ದ.ರಾ.ಬೇಂದ್ರೆಯವರ ಸಾಹಿತ್ಯ ಕೊಡುಗೆ

## ಕವನ ಸಂಗ್ರಹಗಳು-'ಅರಳು ಮರಳು' ಪೂರ್ವದಲ್ಲಿ - ೧೦

೧. ಕೃಷ್ಣಕುಮಾರಿ
೨. ಗರಿ
೩. ಸಖೀಗೀತ
೪. ಮೂರ್ತಿ
೫. ಕಾಮಕಸ್ತೂರಿ
೬. ಉಯ್ಯಾಲೆ
೭. ನಾದಲೀಲೆ
೮. ಕನ್ನಡ ಮೇಘದೂತ
೯. ಹಾಡು-ಪಾಡು
೧೦. ಗಂಗಾವತರಣ

## ಕವನ ಸಂಗ್ರಹಗಳು-'ಅರಳು ಮರಳು' ಅನಂತರದಲ್ಲಿ - ೧೭

೧೧. ಸೂರ್ಯಪಾನ
೧೨. ಹೃದಯ ಸಮುದ್ರ
೧೩. ಮುಕ್ತಕಂಠ
೧೪. ಚೈತ್ಯಾಲಯ
೧೫. ಜೀವಲಹರಿ
೧೬. ಅರಳು ಮರಳು*
೧೭. ನಮನ
೧೮. ಸಂಚಯ
೧೯. ಉತ್ತರಾಯಣ
೨೦. ಮುಗಿಲ ಮಲ್ಲಿಗೆ
೨೧. ಯಕ್ಷಯಕ್ಷಿ
೨೨. ನಾಕುತಂತಿ**
೨೩. ಮರ್ಯಾದೆ
೨೪. ಶ್ರೀಮಾತಾ
೨೫. ಇದು ನಭೋವಾಣಿ
೨೬. ಮತ್ತೆ ಶ್ರಾವಣಾ ಬಂತು
೨೭. ಚತುರೋಕ್ತಿ ಮತ್ತು ಇತರ ಕವನಗಳು.

*ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, **ಜ್ಞಾನಪೀಠ ಪ್ರಶಸ್ತಿ

## ಮರಣೋತ್ತರ ಕವನ ಸಂಕಲನಗಳು - ೬

೨೮. ಪರಾಕಿ
೨೯. ಕಾವ್ಯವೈಖರಿ
೩೦. ತಾ ಲೆಕ್ಕಣಿಕಿ ತಾ ದೌತಿ
೩೧. ಬಾಲಬೋಧೆ
೩೨. ಪ್ರತಿಬಿಂಬಗಳು
೩೩. ಶತಮಾನ

## ಆಯ್ದ ಕವನ ಸಂಕಲನಗಳು - ೯

೩೪. ಬಾ ಹತ್ತರ
೩೫. ವಿನಯ
೩೬. ಒಲವೆ ನಮ್ಮ ಬದುಕು
೩೭. ಚೈತನ್ಯದ ಪೂಜೆ
೩೮. ಶ್ರಾವಣ ಪ್ರತಿಭೆ
೩೯. ಕುಣಿಯೋಣು ಬಾ
೪೦. ಸಮರಸವೇ ಜೀವನ
೪೧. ನಾಳಿನಾ ಕನಸು
೪೨. ನೂರು ಮರ ನೂರು ಸ್ವರ ಒಂದೊಂದು ಅತಿ ಮಧುರ.

## ದ. ರಾ. ಬೇಂದ್ರೆ ಜೀವನ ಮಹಾಕಾವ್ಯ : ಅಂಬಿಕಾತನಯದತ್ತರ ಸಮಗ್ರ ಕಾವ್ಯ : "ಔದುಂಬರಗಾಥೆ"

(ವರಕವಿ ಡಾ॥ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆಯ ಪ್ರಕಟಣೆಗಳು ೮ ಸಂಪುಟಗಳು)

೪೩. ನಮನ ಸಂಪುಟ
೪೪. ದರ್ಶನ ಸಂಪುಟ
೪೫. ವಿಕಾಸ ಸಂಪುಟ
೪೬. ವಿನ್ಯಾಸ ಸಂಪುಟ
೪೭. ತತ್ತ್ವ ಸಂಪುಟ
೪೮. ಸಿದ್ಧಾಂತ ಸಂಪುಟ
೪೯. ಶ್ರೀಮಾತಾರವಿಂದ ಪ್ರಜ್ಞಾಪ್ರಕಾಶ
೫೦. ಸಮಗ್ರ ಸಖೀಗೀತ

## ವರಕವಿ ದ. ರಾ. ಬೇಂದ್ರೆ ಸಂಗೀತ ಅಕಾಡಮಿ ಪ್ರಕಟಣೆಗಳು-೧೦

ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತ ಸಂಯೋಜನೆಗಳೊಂದಿಗೆ ಬೇಂದ್ರೆ ಗೇಯ ಗೀತಗಳ ಸಂಗ್ರಹಗಳು.

೫೧. ಅಂಬಿಕಾತನಯನ ಹಾಡS ಬೆಳದಿಂಗಳ ನೋಡS
೫೨. ನೋಡ್ಯಾನS ದಶಾವತಾರ ಅಂಬಿಕಾತನಯ ಹಾಡ್ಯಾನS
೫೩. ಅಂಬಿಕಾತನಯದತ್ತ ಬೇಂದ್ರೆ ಕಂಡ ಬೆನಕ
೫೪. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ
೫೫. ಅಂಬಿಕಾತನಯದತ್ತ ಬೇಂದ್ರೆ ಕಂಡ ಋತು ದರ್ಶನ
೫೬. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು
೫೭. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾಳಿನಾ ನಾಳಿನಾ ಕನಸು
೫೮. ಅಂಬಿಕಾತನಯದತ್ತ ಬೇಂದ್ರೆ ಕಂಡ ಭಾವ ರಾಗ ಮಂಜರಿ
೫೯. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾದ ನವನೀತ
೬೦. ಬೇಂದ್ರೆ ಸಂಗೀತ-ಸಿದ್ಧಾಂತ ಪ್ರಯೋಗ.

## ನಾಟಕಗಳು - ೧೪

೬೧. ದೆವ್ವನ ಮನೆ
೬೨. ಹಳೆಯ ಗೆಣೆಯರು
೬೩. ಸಾಯೋ ಆಟ
೬೪. ತಿರುಕರ ಪಿಡುಗು
೬೫. ಗೋಲ್
೬೬. ಉದ್ಧಾರ
೬೭. ನಗೆಯ ಹೊಗೆ
೬೮. ಮಂದೀ ಮದಿವಿ
೬೯. ಮಂದೀ ಮಕ್ಕಳು
೭೦. ಮಂದೀ ಮನಿ
೭೧. ಆ ಥರಾ ಈ ಥರಾ
೭೨. ಶೋಭನಾ
೭೩. ಜಾತ್ರೆ
೭೪. ಮಕ್ಕಳು ಅಡಗಿ ಮನೆ ಹೊಕ್ಕರೆ

## ಬೇಂದ್ರೆ ಮಾನಸ ನಾಟಕಗಳು - ೨

೭೫. ಮಿಸ್ ಫಾರ್ಚ್ಯುನ್ - ಪ್ರೊ॥ ಕೆ. ಎಸ್. ಶರ್ಮಾ ವಿರಚಿತ
೭೬. ಕರೆ ಹೆಂಡತಿ ಆದರ ಖರೆ ಹೆಂಡತಿ - ಪ್ರೊ॥ ಎನ್. ಕೆ. ಕುಲಕರ್ಣಿ ವಿರಚಿತ

## ಹರಟೆ, ನಗೆ, ಕಥೆ - ೨

೭೭. ನಿರಾಭರಣ ಸುಂದರಿ
೭೮. ಚೀನದ ಬಾಳು ಬದುಕು (ಅನುವಾದಿತ ಕಥಾ ಸಂಕಲನ)

## ವಿಮರ್ಶೆ - ೧೧

೭೯. ಸಾಹಿತ್ಯ ಮತ್ತು ವಿಮರ್ಶೆ
೮೦. ಸಾಹಿತ್ಯ ಸಂಶೋಧನೆ
೮೧. ವಿಚಾರ ಮಂಜರಿ
೮೨. ಕವಿ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ
೮೩. ಮಹಾರಾಷ್ಟ್ರ ಸಾಹಿತ್ಯ
೮೪. ಕಾವ್ಯೋದ್ಯೋಗ
೮೫. ಕುಮಾರವ್ಯಾಸ (ಪುಸ್ತಿಕೆ)
೮೬. ಸಾಹಿತ್ಯದ ವಿರಾಟ್ ಸ್ವರೂಪ,
೮೭. ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು
೮೮. ಸಾಹಿತ್ಯ ಯೋಗ (ಆಯ್ದ ವಿಮರ್ಶ ಲೇಖನ ಸಂಗ್ರಹ)
೮೯. ಶ್ರೀ ಅರವಿಂದ ಯೋಗ, ಆಶ್ರಮ ಮತ್ತು ತತ್ತ್ವೋಪದೇಶ.
(ಶ್ರೀ ಅರವಿಂದರನ್ನು ಕುರಿತು ಪರಿಚಯ ಪುಸ್ತಿಕೆ)

## ಸಂಪಾದನೆ - ೬

೯೦. ನನ್ನದು ಈ ಕನ್ನಡ ನಾಡು
೯೧. ಹಕ್ಕಿ ಹಾರುತಿದೆ
೯೨. ಹೊಸಗನ್ನಡ ಕ್ಯಾವ್ಯಶ್ರೀ
೯೩. ರವೀಂದ್ರ ಪ್ರಶಸ್ತಿ
೯೪. ಕನಕದಾಸ ಚತುಶ್ಯತಮಾನೋತ್ಸವ ಸಂಸ್ಮರಣ ಸಂಪುಟ
೯೫. ಚಂದ್ರಹಾಸ

## ಸಂಪಾದಿತ ಪತ್ರಿಕೆಗಳು - ೪

೯೬. ವಾಗ್ಭೂಷಣ
೯೭. ಸ್ವಧರ್ಮ
೯೮. ಜಯ ಕರ್ನಾಟಕ
೯೯. ಜೀವನ

## ಅನುವಾದ ಕನ್ನಡಕ್ಕೆ - ೬

೧೦೦. ಉಪನಿಷತ್ ರಹಸ್ಯ ಅಥವಾ ಭಾರತೀಯ ಅಧ್ಯಾತ್ಮ ಶಾಸ್ತ್ರ
ಪೀಠಿಕೆ - ರಂ. ರಾ. ದಿವಾಕರ ಹಾಗೂ ಶಂ. ಬಾ. ಜೋಶಿ
೧೦೧. ಭಾರತೀಯ ನವಜನ್ಮ
೧೦೨. ಗುರು ಗೋವಿಂದಸಿಂಗ
೧೦೩. ಕಬೀರ ವಚನಾವಲಿ
೧೦೪. ಭಗ್ನ ಮೂರ್ತಿ
೧೦೫. ನೂರೊಂದು ಕವನಗಳು

## ಮರಾಠಿಯಲ್ಲಿ - ೬

೧೦೬. ಸಂವಾದ
೧೦೭. ವಿಠಲ ಸಂಪ್ರದಾಯ
೧೦೮. ಶಾಂತಲಾ (ಕಾದಂಬರಿ)
೧೦೯. ಸಂತ ಮಹಂತ ಪೂರ್ಣಶಂಭು ವಿಠಲ (ಪ್ರಬಂಧ)
೧೧೦. ವಿಠ್ಠಲ ಪಾಂಡುರಂಗ (ಕವನ ಸಂಗ್ರಹ)
೧೧೧. ಉಮಾಳಾ (೧೧೩ ಮರಾಠಿ ಕವನಗಳ ಸಂಗ್ರಹ)

## ಇತರ - ೨

೧೧೨. ಮಾತೆಲ್ಲ ಜ್ಯೋತಿ (ಭಾಷಣ ಸಂಗ್ರಹ)
೧೧೩. ಮತ-ಧರ್ಮ ಮತ್ತು ಆಧುನಿಕ ಮಾನವ (ಭಾಷಣಗಳ ಸಂಗ್ರಹ).

## ಇಂಗ್ಲಿಷ ಕೃತಿಗಳು - ೨

114. A Theory of Immortality
115. Language-Mathematics & Truth.

## ಬೇಂದ್ರೆ ಕವನಗಳು ವಿವಿಧ ಭಾಷೆಗಳಲ್ಲಿ ಅನುವಾದ - ೮

116. Dr. D. R. Bendre - Four Strings - ಇಂಗ್ಲಿಷ ಭಾಷೆಯಲ್ಲಿ
117. ಚತುರ್ಮುಖ ಸೌಂದರ್ಯ, ಲೀಲೆ, ಕೀರ್ತಿ - ಜರ್ಮನ್ ಭಾಷೆಯಲ್ಲಿ
118. ಚಾರ್ ತಾರ್ - 'ನಾಕು ತಂತಿ'ಯ ಹಿಂದೀ ಅನುವಾದ
119. ಚಾರ ತಂತು - 'ನಾಕು ತಂತಿ'ಯ ಮರಾಠಿ ಅನುವಾದ
120. Spring Fire
121. Dreaming Tomorrow
122. Three one Act Plays
123. Sakheegeet

(120–123:) Dr. K. Raghavendra Rao
Dr. Vaman Bendre
Dr. K. S. Sharma

---

: ಪುಸ್ತಕಗಳು ದೊರೆಯುವ ಸ್ಥಳ :

"ಶ್ರೀಮಾತಾ ಪ್ರಕಾಶನ", "ವಿಶ್ರಮ ಚೇತನ", ಗೋಕುಲ ರಸ್ತೆ
ಬಸವೇಶ್ವರ ನಗರ, ಹುಬ್ಬಳ್ಳಿ.

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 401,
ಶಿವಮೊಗ್ಗ ಜಿಲ್ಲೆ
ದೂರವಾಣಿ : 08183-228616 (ಕ).

ದ. ರಾ. ಬೇಂದ್ರೆ ಜೀವನ ಮಹಾಕಾವ್ಯ - ಔದುಂಬರಗಾಥೆ-ಅಂಬಿಕಾತನಯದತ್ತರ ಸಮಗ್ರ ಕಾವ್ಯ-ಆರು ಸಂಪುಟಗಳಲ್ಲಿ ವರಕವಿ ಡಾ|| ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆಯ ಹೆಮ್ಮೆಯ ಪ್ರಕಟಣೆಯಾಗಿ ೨೦೦೩ರಲ್ಲಿ ಪ್ರಕಟಗೊಂಡಿದೆ. ಅದರಲ್ಲಿ,

(೧) ನಮನ ಸಂಪುಟ :

(೧) ಶ್ರುತಿ ನಮನ (೨) ದೇವ ನಮನ (೩) ಗುರು ನಮನ (೪) ಕವಿ ನಮನ ಎಂಬ ನಾಕು ವಿಭಾಗಗಳಿವೆ. ಬೇಂದ್ರೆಯವರ ಶ್ರಾವಣ ಪ್ರತಿಭೆ-ಕನ್ನಡ, ಮರಾಠಿ, ಇಂಗ್ಲಿಷ್, ಸಂಸ್ಕೃತ ಹಾಗೂ ಹಿಂದಿ ಮನದ ಭಾಷೆ, ಮನೆಯ ಭಾಷೆ, ಅಂತರ್‌ರಾಷ್ಟ್ರೀಯ ಭಾಷೆ, ಭಾರತೀಯ ಭಾಷೆ ಹಾಗೂ ರಾಷ್ಟ್ರ ಭಾಷೆಯ ಹಿರಿಯ ಅನೇಕ ಕವಿಗಳ ಮಹೋನ್ನತ ಕೃತಿಗಳ ಭಾವಾನುವಾದ ಮಾಡಿ ನಮನ ಸಲ್ಲಿಸಲಾಗಿದೆ. ಈ ಸಂಪುಟದಲ್ಲಿ ಆದಿಕವಿ ಪಂಪ, ಬಸವಣ್ಣ, ಅಲ್ಲಮಪ್ರಭು, ರತ್ನಾಕರ ಹಾಗೂ ಮುದ್ದಣ ಕವಿ ನಮನ ವಿಶಿಷ್ಟವಾಗಿವೆ.

(೨) ದರ್ಶನ ಸಂಪುಟ :

(೫) ಬೇಂದ್ರೆ ಕವಿ ಕಾವ್ಯ ಮಹತಿಯ ದರ್ಶನ (೬) ವಿಶ್ವ ದರ್ಶನ (೭) ಭಾರತ ದರ್ಶನ ಮತ್ತು ಕನ್ನಡ ಭಾಷೆಯನ್ನು-''ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ ಅಂಬಿಕಾತನಯನಿವನು'' ಎಂಬ ಉಕ್ತಿಯನ್ನು - ಸಾರ್ಥಕಗೊಳಿಸಿದ ಸಂಪುಟ ಇದು ಆಗಿದೆ.

(೩) ವಿಕಾಸ ಸಂಪುಟ :

(೯) ನಾಯಕ-ನಾಯಿಕೆ ವಿಕಾಸ (೧೦) ಸಂತಾನ ವಿಕಾಸ (೧೧) ಗೆಳೆತನದ ವಿಕಾಸ (೧೨) ಜೀವನ ದೃಷ್ಟಿ ವಿಕಾಸ ಎಂಬ ವಿಭಾಗಗಳು ಇಲ್ಲಿವೆ. ಬೇಂದ್ರೆ ಜೀವನ ಮಹಾಕಾವ್ಯದ ನಾಯಕ - ದ. ರಾ. ಬೇಂದ್ರೆ; ನಾಯಿಕೆ-ಲಕ್ಷ್ಮಿಬಾಯಿ ಬೇಂದ್ರೆ; ಬೇಂದ್ರೆಯವರ ೯ ಸಂತತಿ; ಬೇಂದ್ರೆಯವರ ಸಮಕಾಲೀನ ವಿವಿಧ ಭೂಮಿಕೆಯ ಗೆಳೆಯರು-ವಿವಿಧ ಪಾತ್ರಗಳಾಗಿ ಬೇಂದ್ರೆ ಜೀವನ ದೃಷ್ಟಿ ವಿಕಸಿತಗೊಂಡುದರ ಅರಿವು, ಇರವು, ಹರವು ಇಲ್ಲಿದೆ.

(೪) ವಿನ್ಯಾಸ ಸಂಪುಟ :

(೧೩) ಪಂಚಮಹಾಭೂತ ವಿನ್ಯಾಸ (೧೪) ನಾಕು ಪುರುಷಾರ್ಥ ವಿನ್ಯಾಸ (೧೫) ಆರು ಋತುವಿನ್ಯಾಸ (೧೬) ಸಪ್ತಕಲಾ ವಿನ್ಯಾಸ ಎಂಬ ವಿಭಾಗಗಳು ಇಲ್ಲಿವೆ. ಬೇಂದ್ರೆಯವರು - ಪೃಥ್ವಿ ಆಪ್, ತೇಜ, ತತ್ತ್ವಗಳನ್ನು; ಅನ್ನಧರ್ಮ, ಒಲವು ಸಿದ್ದಾಂತ, ದುಡ್ಡು-ದುಡಿತ ಹಾಗೂ ಜೀವನ್ಮುಕ್ತಿ ಪುರುಷಾರ್ಥಗಳನ್ನು; ಋತು ವೈಭವವನ್ನು ಹಾಗೂ - ಚಿತ್ರ, ಸಂಗೀತ, ನೃತ್ಯ, ನಾಟಕ, ವಸ್ತುಶಿಲ್ಪ ಎಂಬ ಆರು ಮಹತ್ತ್ವಕಲೆಗಳ ಶಕ್ತಿಗಳ ಸಾಧನೆಯಿಂದ ಜೀವನ ಕಲಾ ಸಿದ್ಧಿಯನ್ನು ಸಂಪಾದಿಸುವ ಬಗೆಯನ್ನು ಇಲ್ಲಿ ವರ್ಣಿಸಲಾಗಿದೆ.

(೫) ತತ್ತ್ವ ಸಂಪುಟ :

(೧೭) ಓಂ ತತ್‌ಸತ್ ತತ್ತ್ವ (೧೮) ಸಾಮಾಜಿಕ ಪ್ರಜ್ಞಾ ತತ್ತ್ವ (೧೯) ವಿನೋದ-ವಿಡಂಬನೆ ತತ್ತ್ವ (೨೦) ಬದುಕು-ಬಾಳು ತತ್ತ್ವ ಎಂಬ ವಿಭಾಗಗಳು ಇಲ್ಲಿವೆ ಬದುಕನ್ನು ಬಾಳುಗೊಳಿಸುವ ಅಮರ ವಿದ್ಯೆಯ ಪ್ರತಿಪಾದನೆ ಇಲ್ಲಿದೆ.

(೬) ಸಿದ್ಧಾಂತ ಸಂಪುಟ :

(೨೧) ಸೌಂದರ್ಯ ಸಿದ್ಧಾಂತ (೨೨) ಮೂರ್ತಿ ಸಿದ್ಧಾಂತ (೨೩) ಸಂಖ್ಯಾ ಸಿದ್ಧಾಂತ (೨೪) ಹೃದಯ-ವಿವೇಕ ಸಿದ್ಧಾಂತ (೨೫) ನವಮಾನವೀಯತೆಯ ಆವಿರ್ಭಾವ ಸಿದ್ಧಾಂತ ಎಂಬ ವಿಭಾಗಗಳು ಇಲ್ಲಿವೆ. ಬೇಂದ್ರೆಯವರ ಜೀವನದ ೨೫ ತತ್ತ್ವಗಳನ್ನು ಪ್ರತಿಪಾದಿಸುವ ೧೪೨೭ ಕವನಗಳಿಂದ ವಿಸ್ತಾರಗೊಂಡ-ಜೀವನ ಮಹಾಕಾವ್ಯ- ಅಂಬಿಕಾತನಯದತ್ತರ ಸಮಗ್ರ ಕಾವ್ಯ - ಔದುಂಬರಗಾಥೆ ಎಂಬ ಅನನ್ಯ ಮಹಾಕಾವ್ಯದ ಶಿಲ್ಪ, ಸೌಂದರ್ಯ ಮಹತಿ, ಮಹೋನ್ನತಿಯ ಬೆಳಕಿನ ಪಥ ಇದು. -

ಆರು ಸಂಪುಟಗಳ ಬೆಲೆ : ರೂ.೨,೧೦೦-೦೦ (ಅಂಚೆವೆಚ್ಚ ಪ್ರತ್ಯೇಕ)

ಪ್ರತಿಬಿಂಬಗಳು

‘‘ಪ್ರತಿಬಿಂಬಗಳು’’ ಬೇಂದ್ರೆ ಸಮಗ್ರ ಕಾವ್ಯದ ಮೂವತ್ತೆರಡನೆಯ ಹಾಗೂ ಮರಣೋತ್ತರ ಪ್ರಕಟಗೊಂಡ ಐದನೆಯ ಕವನ ಸಂಗ್ರಹ. ‘‘ಅರಳು-ಮರಳು’’ ನಂತರ ಮರಳಿ ಅರಳಿದ ಹದಿನಾರನೆಯ ಕೃತಿ. ಕನ್ನಡ, ಮರಾಠಿ, ಇಂಗ್ಲಿಷ್, ಸಂಸ್ಕೃತ ಹಾಗೂ ವೈಜ್ಞಾನಿಕ ಗ್ರಂಥಗಳನ್ನು ಓದುವಾಗ ಆ ಗ್ರಂಥಗಳಿಗೆ ಸಂಬಂಧಿಸಿದ ಅಥವಾ ಬೇರೆ ಚಿಂತನದಿಂದ ಹೊಳೆದ ವಿಚಾರಗಳಿಗೆ ಬೇಂದ್ರೆ ಕೊಟ್ಟ ಕಾವ್ಯಾಭಿವ್ಯಕ್ತಿ ಈ ಸಂಕಲನದ ಒಂದು ವೈಶಿಷ್ಟ್ಯ.

ಬಿಂಬ ಎಂದರೆ ಪರಮಾತ್ಮ, ಪ್ರತಿಬಿಂಬ ಎಂದರೆ ಜೀವ ಎಂಬುದು ಆಧ್ಯಾತ್ಮಿಕ ದೃಷ್ಟಿ. ದೇಹದ ಬಾಹ್ಯಪರಿಚಯ ಮತ್ತು ದೇಹಿಯ ಅಂತರಂಗದ ಪರಿಚಯದಲ್ಲಿ ಬಿಂಬ-ಪ್ರತಿಬಿಂಬ ಸಿದ್ಧಾಂತ ಕಾರ್ಯ ಮಾಡುತ್ತದೆ. ಗಂಗಾವತರಣದೊಳಗಿನ ‘ನಾನು’ ಮತ್ತು ನಾಕುತಂತಿಯೊಳಗಿನ ‘ಪಾಲಿಗೆ ಬಂದದ್ದು’, ‘ಅಹಂ ಇದಂ’ ಬೇಂದ್ರೆಯವರು ಮಾಡಿಕೊಂಡ ಆತ್ಮಪರೀಕ್ಷೆಯ ಅತ್ಯುತ್ತಮ ಉದಾಹರಣೆಗಳು. ಪ್ರತಿಬಿಂಬದೊಳಗಿನ ‘ಇತ್ತೀಚೆ ಬೇಂದ್ರೆ ಮಾಸ್ತರ ಏನ್ ಮಾಡ್ತಾರ?’ ಹಾಗೂ ‘ಕವಿಯ ಬಟ್ಟೆ’ ಕೂಡ ಆತ್ಮಪರೀಕ್ಷೆಯ ನಿಲುವನ್ನು ಸಮರ್ಥಿಸುತ್ತವೆ. ‘ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ ಅಂಬಿಕಾತನಯನಿವನು’, ಇದು ಬೇಂದ್ರೆ ಮಾಡಿದ ಮಹಾನ್ ಕಾರ್ಯ.

ಕವಿ ಮತ್ತು ಕಾವ್ಯ ಇವರಲ್ಲಿ ಪ್ರತಿಬಿಂಬ ಮತ್ತು ಪ್ರತಿಧ್ವನಿ ಕಾರ್ಯ ಸಾತತ್ಯದಿಂದ ಸಾಗಿರುತ್ತದೆ. ಸಾಮರಸ್ಯ ಸಿದ್ಧಾಂತದ ಕಾರ್ಯಾಚರಣೆ ಇವರ ಗುರಿ. ‘‘ಪ್ರತಿಬಿಂಬಗಳು’’ ಇದನ್ನು ಬಿಂಬಿಸುತ್ತದೆ.